# ವೈದೇಹಿಯವರ ಕಥೆಗಳಲ್ಲಿ ಸ್ತ್ರೀ ಸ್ವಾತಂತ್ರ್ಯದ ಕಲ್ಪನೆ

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ. ಫಿಲ್ ಪದವಿಗಾಗಿ

ಸಾದರಪಡಿಸಿದ ನಿಬಂಧ



ಸಂಶೋಧಕಿ

ಲಾವಣ್ಯ. ಎಸ್ . ಪಿ



ಮಾರ್ಗದರ್ಶಕರು

ಡಾ. ಟಿ. ವೆಂಕಟೇಶಮೂರ್ತಿ

ಮುಖ್ಯಸ್ಥರು , ಕನ್ನಡ ವಿಭಾಗ

ಬಿ.ಇ.ಎಸ್. ಪದವಿ ಸಂಜೆ ಕಾಲೇಜು,

ಜಯನಗರ, ಬೆಂಗಳೂರು. - 11

**ಕಾವ್ಯಮಂಡಲ, ಬೆಂಗಳೂರು**

(ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿರುವ ಸಂಸ್ಕೃತಿ ಅಧ್ಯಯನ ಕೇಂದ್ರ)

೨೦೦೭

592

## ಪ್ರಮಾಣ ಪತ್ರ

"ವೈದೇಹಿಯವರ ಕಥೆಗಳಲ್ಲಿ ಸ್ತ್ರೀ ಸ್ವಾತಂತ್ರ್ಯದ ಕಲ್ಪನೆ " ಎಂಬ ಶೀರ್ಷಿಕೆಯ ನಿಬಂಧವನ್ನು ಡಾ. ಟಿ. ವೆಂಕಟೇಶಮೂರ್ತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿರುವ ಕಾವ್ಯಮಂಡಲ ಅಧ್ಯಯನ ಸಂಸ್ಥೆಗೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಈ ನಿಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Lavanya.

ದಿನಾಂಕ :

ಸ್ಥಳ : ಬೆಂಗಳೂರು

ಲಾವಣ್ಯ. ಎಸ್. ಪಿ

ಸಂಶೋಧಕಿ

# ದೃಢೀಕರಣ ಪತ್ರ

ಲಾವಣ್ಯ . ಎಸ್. ಪಿ ಇವರು "ವೈದೇಹಿಯವರ ಕಥೆಗಳಲ್ಲಿ ಸ್ತ್ರಿ ಸ್ವಾತಂತ್ರ್ಯದ ಕಲ್ಪನೆ " ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿರುವ ಕಾವ್ಯ ಮಂಡಲ ಅಧ್ಯಯನ ಸಂಸ್ಥೆಗೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಈ ನಿಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಧೃಢೀಕರಿಸುತ್ತೇನೆ.

ಡಾ. ಟಿ. ವೆಂಕಟೇಶಮೂರ್ತಿ
ಮುಖ್ಯಸ್ಥರು, ಕನ್ನಡ ವಿಭಾಗ,
ಬಿ.ಇ.ಎಸ್. ಪದವಿ ಸಂಜೆ ಕಾಲೇಜು,
ಜಯನಗರ, ಬೆಂಗಳೂರು.

ದಿನಾಂಕ :

ಸ್ಥಳ : ಬೆಂಗಳೂರು

ಪರಿವಿಡಿ

# ಅಧ್ಯಾಯ - ೧

## ಅಧ್ಯಯನದ ಮಹತ್ವ ಮತ್ತು ವ್ಯಾಪ್ತಿ

ಪಾಶ್ಚಾತ್ಯ ದೇಶಗಳಲ್ಲಿ ಹುಟ್ಟಿ ಬೆಳೆದ 'ಸ್ತ್ರೀವಾದಿ' ಸಂಕಥನವು ಮಹಿಳಾ ದೃಷ್ಟಿಕೋನ, ಮಹಿಳಾ ಸಾಹಿತ್ಯ ಪರಂಪರೆಗಳನ್ನು ಕುರಿತಂತೆ ಚರ್ಚೆಗಳನ್ನು ಸೃಷ್ಟಿಸುತ್ತ, ಚಳುವಳಿಗಳನ್ನು ರೂಪಿಸುತ್ತಾ ಬಂದಿದೆ. ಈಗಿನ ಸೃಜನಶೀಲ ಮತ್ತು ಚಿಂತನಾಶೀಲ ಮಹಿಳೆಯರ ಬರಹಗಳ ಮೇಲೆ ತನ್ನದೇ ಆದ ವಿಶಿಷ್ಟ ಪ್ರಭಾವವನ್ನು ಬೀರಿದೆ. ಮಹಿಳೆಯರ ಕಾವ್ಯ, ಕತೆ, ಕಾದಂಬರಿ, ನಾಟಕ, ಚಿಂತನಶೀಲ ಬರಹಗಳಿಗೆ ಹಾಗೂ ಸಂಶೋಧನಾತ್ಮಕ ಪ್ರಬಂಧಗಳಿಗೆ ಪ್ರೇರಣೆ ಒದಗಿಸಿದೆ. ಮಹಿಳಾ ಪ್ರಜ್ಞೆ, ಸಮಗ್ರತೆಗಾಗಿ ಹುಡುಕಾಟ, ತನ್ನತನದ ಸಾಕ್ಷಾತ್ಕಾರ, ಸ್ತ್ರೀ ಸಂವೇದನೆ, ಸ್ತ್ರೀ ಸ್ವಾತಂತ್ರ್ಯ, ಸ್ತ್ರೀತ್ವ ಮೊದಲಾದ ಪರಿಕಲ್ಪನೆಗಳನ್ನು ಸಂಸ್ಕೃತಿ, ಪುರಾಣ, ಇತಿಹಾಸ, ರಾಜಕಾರಣ ಇವುಗಳ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸುವ ಪ್ರಯತ್ನಗಳು ನಡೆಯುತ್ತಿವೆ.

ಹದಿನೆಂಟನೆಯ ಶತಮಾನದ ಸಂದರ್ಭದಲ್ಲಿ ಮೇರಿ ವುಲ್‌ಸ್ಟನ್ ಕ್ರಾಫ್ಟ್ ಬರೆದ **'ಎ ವಿಂಡಿಕೇಷನ್ ಆಫ್ ರೈಟ್ಸ್ ಆಫ್ ವುಮೆನ್'** ( A Vindication of rights of women ) ಹಾಗೂ ಸಿಮೋನ್‌ದ ಬುವಾ ಬರೆದ ' ದ ಸೆಕೆಂಡ್ ಸೆಕ್ಸ್' (The Second Sex ) ಎಂಬ ಪುಸ್ತಕಗಳ ಮೂಲಕ ಪಾಶ್ಚಾತ್ಯ ಸ್ತ್ರೀವಾದದ ಚರ್ಚೆ ಆರಂಭವಾಯಿತು. ಇದರಲ್ಲಿ ಮಹಿಳಾ ಓದುಗರು ತಮ್ಮನ್ನು ತಾವು ಕ್ಷುಲ್ಲಕ, ಅಸಹಾಯಕ ಎಂದು ನಂಬುವಂಥ ಸ್ತ್ರೀ ಚಿತ್ರಣಗಳನ್ನು, ಪುರುಷ ನಿರ್ಮಿಸಿದ ಸ್ತ್ರೀ ಮಾದರಿಗಳನ್ನು ಇವರು ಕಟುವಾಗಿ ವಿಮರ್ಶಿಸಿದ್ದಾರೆ. ವರ್ಜೀನಿಯ ವೂಲ್ಫ್, ಸಿಮೋನ್ ದ ಬುವಾ, ಆ್ಯಲೀಸನ್ ಜಾಗರ್, ಕೇಟ್ ಮಿಲೆಟ್, ಇವಾ ಫಿಜಸ್, ಎಲೈನ್ ಶೋವಾಲ್ಟರ್ ಮೊದಲಾದ ಸ್ತ್ರೀವಾದಿ ಚಿಂತಕರು ಲಿಂಗರಾಜಕಾರಣದ ಪ್ರಭಾವಶಾಲೀ ಅಧಿಕಾರ ಶಕ್ತಿಯನ್ನು ಪ್ರಶ್ನಿಸುವ, ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಚಿಂತನೆಗಳನ್ನು ಬೆಳೆಸಿದವರಲ್ಲಿ ಪ್ರಮುಖರಾಗಿದ್ದಾರೆ.

"ಪಾಶ್ಚಾತ್ಯ ದೇಶಗಳಲ್ಲಿ ಹುಟ್ಟಿ ಬೆಳೆದು ಕೆಲವೊಮ್ಮೆ ಅಡ್ಡ ಹಾದಿ ಹಿಡಿದು ಅಪಹಾಸ್ಯಕ್ಕೂ ಗುರಿಯಾದ ಮತ್ತು ಮೊದಮೊದಲು ಆಮದಾಗಿರುವ ಸಾಹಿತ್ಯವೋ ಎಂಬ ಭ್ರಮೆ ಹುಟ್ಟಿಸುತ್ತಿದ್ದ ಸ್ತ್ರೀವಾದವು ಈಗ ಕನ್ನಡ ಭಾಷೆಗೆ,ಕನಡ ಸಂಸ್ಕೃತಿಗೆ, ಕನ್ನಡ ಸಾಹಿತ್ಯಕ್ಕೆ ಸಿಧಾನವಾಗಿ ಅಂದರೆ ಗಟ್ಟಿಯಾಗಿ ತನ್ನ ಬೇರಿಳಿಸುತ್ತಿದೆ. ಈ ಶತಮಾನದ ಕನ್ನಡ ನಾಡು ಕಂಡ ನವೋದಯ, ನವ್ಯ, ಬಂಡಾಯ, ದಲಿತ ಸಂವೇದನೆಗಳಷ್ಟೆ ಪರಿಣಾಮಕಾರಿಯಾಗಿ ನೆಲೆಯೂರುವ ಸೂಚನೆಗಳು ಕಾಣುತ್ತೀವೆ."[೧] ಎಂದು ಡಾ. ಎಸ್.ಪ್ರಭಾವತಿಯವರು ಹೇಳಿದ್ದಾರೆ. ಮುಂದುವರೆದು ಕಳೆದ ಹದಿನೈದು ವರ್ಷಗಳಿಂದೀಚೆಗೆ ಸ್ತ್ರೀವಾದವು ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದವೆಂದರೇನು ಎಂಬ ಬಾಲಿಶ ಪ್ರಶ್ನೆಯಿಂದ ಹಿಡಿದು, ಸ್ತ್ರೀವಾದಿಗಳೆಲ್ಲರು ಸ್ವಚ್ಛಂದ ಸ್ವತಂತ್ರರು ಎಂದು ತಿಳಿಯುವ, ವಾದಿಸುವ ಅತಿರೇಕದವರೆಗೆ ಇವರ ವ್ಯಾಪ್ತಿಯಿದೆ."[೨] ಎಂದು ಅಭಿಪ್ರಾಯ ಪಡುತ್ತಾರೆ.

ಭಾರತೀಯ ಸಂಸ್ಕೃತಿಯಲ್ಲಿ ಮೊದಲಿನಿಂದಲೂ ಪಿತೃಪ್ರಧಾನ ವ್ಯವಸ್ಥೆ ಪ್ರಚಲಿತದಲ್ಲಿದ್ದು, ಶಕ್ತಿ ದೇವತೆ ಹೆಣ್ಣಾಗಿದ್ದರೂ ಇತಿಹಾಸದುದ್ದಕ್ಕೂ ಹೆಣ್ಣು ಅಬಲೆ, ಅಧೀನಳಂತೆಯೇ ಚಿತ್ರಿಸುತ್ತಾ ಬರಲಾಯಿತು. '' **ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ** '' ಎಂದು ಹೇಳಿದ ಮನು, ''ನ ಸ್ತ್ರೀ ಸ್ವಾತಂತ್ರ್ಯ **ಮರ್ಹತಿ**'' ಎಂದೂ ಕೂಡ ಹೇಳಿ ಸ್ತ್ರೀ - ಪುರುಷರ ನಡುವೆ ವೈರುಧ್ಯಗಳನ್ನೇ ಸೃಷ್ಟಿಸಿದ.

ಪರಂಪರೆಯ ಪೂರ್ವದಿಂದಲೇ ಸ್ವತಂತ್ರ್ಯ ವ್ಯಕ್ತಿತ್ವವನ್ನು ಕಳೆದುಕೊಂಡ ಮಹಿಳೆಯರು ಪುರುಷರ ಕೈಗೊಂಬೆಗಳಾಗಿಯೇ ಬದುಕುತ್ತಾ ಬಂದರು. ಧರ್ಮ, ಜಾತಿ, ಅಂತಸ್ತುಗಳೆಂಬ ಅಧಿಕಾರ ಕೇಂದ್ರಗಳು ಹೆಣ್ಣನ್ನು ನಾಲ್ಕು ಗೋಡೆಗಳಲ್ಲಿ ಅಡಗಿಸಿದವು. ಅಲ್ಲದೆ, ಬಂಗಾರದ ಆಭರಣಗಳಿಂದ ಬಂಧನದಲ್ಲಿ ಇರಿಸಿದವು. ದೇಸೀಯ ರಾಜ ಮಹಾರಾಜರುಗಳು ಕೂಡ ಮಹಿಳೆಯರನ್ನು ತಮ್ಮ ಭೋಗ ಜೀವನದ ಭಾಗವೆಂಬಂತೆ ಪರಿಗಣಿಸಿದ್ದರು. ಸನಾತನ ಸಾಹಿತ್ಯಗಳು ಮಹಿಳೆಯನ್ನು **'ದೇವಿ'**, **'ಶಕ್ತಿಸ್ವರೂಪಿ'** ಯನ್ನಾಗಿ ಚಿತ್ರಿಸಿ ಮನುಷ್ಯಳಾಗಿ ಬದುಕುವ ಅವಕಾಶವನ್ನೇ ಕಸಿದುಕೊಂಡವು. ಭಾರತದ ಮಹಿಳೆ ಧಾರ್ಮಿಕ ಜೀವನದಲ್ಲಿ ಶೂದ್ರಳೂ ಗೃಹ ಜೀವನದಲ್ಲಿ ದಾಸಿಯೂ ಆಗಿ ಬೆಳೆದು ಬಂದಳು. ಇಲ್ಲಿನ ಮಹಿಳೆ ಈ ಬಗೆಯ ಪ್ರತಿಮೆಗಳ ಸುಳಿಯಿಂದಾಗಿ ವಾಸ್ತವ ಜೀವನದಿಂದ ಬಹುದೂರ ಉಳಿಯುವುದು ಅನಿವಾರ್ಯವಾಯಿತು. ತಮ್ಮ ಬದುಕಿನಲ್ಲಿ ಗಂಡ – ಮಕ್ಕಳು ಮತ್ತು ಆಭರಣಗಳಲ್ಲಷ್ಟೇ ತೃಪ್ತಿ ಕಾಣುವಂತಾಯಿತು. ಮನೆಗಳಲ್ಲಿ ಗೃಹಕೃತದ ವಸ್ತುಗಳೆಂಬಂತೆ ಇದ್ದು, ಶಿಕ್ಷಣದ ಸೋಂಕಿಲ್ಲದ, ತನ್ನತನದ ಅರಿವಿಲ್ಲದ, ಸ್ವವ್ಯಕ್ತಿತ್ವವಿಲ್ಲದೇ ದುಡಿಯುವ ಪಶುಗಳಂತೆ ಇದ್ದುಬಿಡುವುದು ಅನಿವಾರ್ಯವಾಯಿತು. ಇದು ಆಧುನಿಕ ಪೂರ್ವದ ಮಹಿಳೆಯರ ಚಿತ್ರಣ.

ಆಧುನಿಕ ಭಾರತ ಸಂದರ್ಭದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸ್ತ್ರೀಯರು ಸೃಜನಶೀಲತೆಯಲ್ಲಿ ತೊಡಗಿದ್ದರೂ ಸ್ತ್ರೀ ಸ್ವಾತಂತ್ರ್ಯ ಎಂಬ ಕಲ್ಪನೆ ಇನ್ನೂ ಚರ್ಚೆಯ ವಿಷಯವಾಗಿಯೇ ಉಳಿದಿದೆ. ಈ ಸಂದರ್ಭದಲ್ಲಿ ಸ್ತ್ರೀವಾದ ಕುರಿತ ಸಾಹಿತ್ಯ ರಚನೆಗಳು ಸ್ತ್ರೀ ಶಿಕ್ಷಣ, ಸ್ತ್ರೀ ಜಾಗೃತಿ, ಸ್ತ್ರೀ ಸುಧಾರಣೆ, ಪ್ರಗತಿಗಳೆಲ್ಲದರ ಪ್ರಭಾವದಿಂದಲೇ ಹುಟ್ಟುಕೊಂಡವುಗಳಾಗಿವೆ. ಅಮೃತ ಪ್ರೀತಮ್, ಕಮಲದಾಸ್ ಮೊದಲಾದ ಲೇಖಕಿಯರು ಗಾಂಧಿಯುಗದಿಂದ ಇಂದಿನವರೆಗೂ ಅಭಿವ್ಯಕ್ತಿ ಸ್ವಾತಂತ್ರ್ಯ ಪಡೆದು, ತಮ್ಮ ಅನೇಕ ಮಿತಿಗಳ ನಡುವೆಯೂ ಸಾಹಿತ್ಯ ರಚನೆಗೆ ತೊಡಗಿದ್ದು ಗಮನಾರ್ಹವಾಗಿದೆ. ಶ್ಯಾಮಲಾದೇವಿ, ಸರಸ್ವತಿ ರಾಜವಾಡೆಯಂಥ ಆದ್ಯ ಮಹಿಳಾ ಕತೆಗಾರ್ತಿಯರು ತಮ್ಮ ಕತೆಗಳಲ್ಲಿ ಪಾರಂಪರಿಕ ಮೌಲ್ಯಗಳನ್ನು ಅದು ಇರುವಂತೆಯೇ ಚಿತ್ರಿಸುವುದರ ಜೊತೆಗೆ ವಿಮರ್ಶೆಗೂ ಒಳಗೂ ಮಾಡಿದ್ದಾರೆ.

ಬಸವಯುಗದ ನಂತರ, ಕನ್ನಡದಲ್ಲಿ **'ಮಹಿಳಾದನಿ'** ಪ್ರಮುಖವಾಗಿ ಕಾಣಿಸಿಕೊಂಡಿದ್ದು ೧೯೭೦ರ ನಂತರದ ಸಂದರ್ಭದಲ್ಲಿ. ಇದಕ್ಕೂ ಮುಂಚೆ ಅಂದರೆ ಸ್ವತಂತ್ರ್ಯ ಪೂರ್ವ ಸಂದರ್ಭದಲ್ಲಿ ತಿರುಮಲಾಂಬಾ, ಕಲ್ಯಾಣಮ್ಮ, ಕೊಡಗಿನ ಗೌರಮ್ಮ, ಶ್ಯಾಮಲಾದೇವಿ, ಜಾನಕಮ್ಮ ಮೊದಲಾದ ಲೇಖಕಿಯರು ತಮ್ಮ ಕೃತಿಗಳಲ್ಲಿ ಸ್ತ್ರೀಯ ಸ್ಥಾನಮಾನಗಳು, ಮಾನಪಮಾನಗಳು, ನೋವು–ನಲಿವುಗಳು, ವಿವಾಹ ಪೂರ್ವ – ವಿವಾಹ ನಂತರದ ಲೈಂಗಿಕ ಸಂಬಂಧಗಳು, ಬಾಲ್ಯವಿವಾಹ, ವಿಧವಾ ವಿವಾಹ, ವರದಕ್ಷಿಣೆಯಂತಹ ಸಮಸ್ಯೆಗಳನ್ನು ಕುರಿತು ಪ್ರಗತಿಪರವಾಗಿ ವಿವೇಚಿಸಿದ್ದಾರೆ. ಆದರೂ ಎಂ.ಕೆ. ಇಂದಿರಾ ಅವರ **'ಗೆಜ್ಜೆಪೂಜೆ'** **'ಫಣಿಯಮ್ಮ'** ಗಳಂತಹ ಕಾದಂಬರಿಗಳಲ್ಲಿ ಹೆಣ್ಣಿನ ಜೀವನಕ್ರಮದ ಆತ್ಮೀಯ ಚಿತ್ರಗಳಿದ್ದರೂ ಸ್ತ್ರೀ ಸ್ವಾತಂತ್ರ್ಯದ ನೆಲೆಯಲ್ಲಿ ಪರಿಶೋಧಿಸುವ ಪೂರ್ಣಪ್ರಮಾಣದ ಚಿಂತನೆಗಳು ನಡೆಯಲಿಲ್ಲವೆಂದೇ ಹೇಳಬಹುದು.

"ಆದರೂ ಶೈಕ್ಷಣಿಕ ಅವಕಾಶ–ಸಾಮಾಜಿಕ ಸ್ವಾತಂತ್ರ್ಯ ಇಲ್ಲದ ಅಂದಿನ ಸಂದರ್ಭದಲ್ಲಿ ಲೇಖಕಿಯರು ಸ್ತ್ರೀ ಜಗತ್ತಿನ ಸಮಸ್ಯೆಗಳನ್ನು ವಸ್ತುನಿಷ್ಠವಾಗಿ ಮತ್ತು ಅನುಭವಾತ್ಮಕವಾಗಿ ಸರಳವಾದ ಶೈಲಿಯಲ್ಲಿ ಆತ್ಮೀಯವಾಗಿ

ಚಿತ್ರಿಸಿದ್ದು ಆಶಾದಾಯವಾಗಿದೆ."[5] ಎನ್ನುತ್ತಾರೆ ಡಾ.ವಿಜಯಾ ಸಬರದ ಅವರು. ಹಾಗೆಯೇ ಪ್ರಗತಿಶೀಲ ಸಂದರ್ಭದಲ್ಲಿನ ಲೇಖಕಿಯರ ಬರಹಗಳಲ್ಲಿ ಕಂಡುಬರುವ ಸ್ತ್ರೀ ಸಂವೇದನೆಯ ವಿವಿಧ ನೆಲೆಗಳನ್ನು ಹೀಗೆ ಕಟ್ಟಿಕೊಡುತ್ತಾರೆ. "ಅನುಪಮ ನಿರಂಜನರ ಇತ್ತೀಚಿನ ಕಾದಂಬರಿಗಳ ಸ್ತ್ರೀ ಪಾತ್ರಗಳು ವ್ಯವಸ್ಥೆಯ ವಿರುದ್ಧ ಪ್ರತಿಭಟಿಸುವಂತೆ, ಪ್ರಶ್ನಿಸುವಂತೆ ಹಾಗೂ ಸಮಾನತೆಗಾಗಿ ಹೋರಾಡುವಂತೆ ವಾಣಿ, ಎಂ.ಕೆ.ಇಂದಿರಾ, ತ್ರಿವೇಣಿಯವರ ಕಾದಂಬರಿಗಳ ಸ್ತ್ರೀ ಪಾತ್ರಗಳು ಪ್ರಶ್ನಿಸುವುದಿಲ್ಲ, ಪ್ರತಿಭಟಿಸುವುದಿಲ್ಲ. ತ್ರಿವೇಣಿಯವರು ಸ್ತ್ರೀ ಸಂವೇದನೆಗಳನ್ನು ಮನಃಶಾಸ್ತ್ರದ ನೆಲೆಯಲ್ಲಿ ಚಿತ್ರಿಸಿದರೆ, ಅನುಪಮಾ ಅವರು ಸ್ತ್ರೀ ಕೇಂದ್ರಿತ ಪಾತ್ರಗಳನ್ನು ವೈಚಾರಿಕ ನೆಲೆಯಲ್ಲಿ ಚಿತ್ರಿಸಿದ್ದಾರೆ.... ಸ್ತ್ರೀ ಸ್ವತಂತ್ರತೆ-ಆರ್ಥಿಕ ಸಮಾನತೆಯಂತಹ ಆಶಯಗಳನ್ನು ತಮ್ಮ ಕಾದಂಬರಿಗಳಲ್ಲಿ ಪ್ರತಿಪಾದಿಸಿದ್ದಾರೆ."[6]

ಒಟ್ಟಿನಲ್ಲಿ ನವೋದಯ ಮತ್ತು ನವ್ಯ ಈ ಎರಡು ಸಾಹಿತ್ಯಿಕ ಸಂದರ್ಭದ ಮಹಿಳಾ ಸಾಹಿತ್ಯದಲ್ಲಿ ಸ್ತ್ರೀ ಸ್ವತಂತ್ರತೆ-ಸಮಾನತೆ, ಸಾಂಪ್ರದಾಯಿಕ ಮೌಲ್ಯಗಳ ಸ್ವೀಕರಣೆ-ನಿರಾಕರಣೆಯ ಆಶಯಗಳು ಹಾಗೂ ಸಾಮಾಜಿಕ ಕಾಳಜಿಯುಳ್ಳದ್ದಾಗಿದೆ. ಬದುಕಿನ ಸಾಮರಸ್ಯದ ಹಂಬಲ, ಜೀವನಪ್ರೀತಿ, ಮಾನವೀಯತೆಗಳು ಇವರ ಕೃತಿಗಳ ಆಶಯಗಳಾಗಿವೆ.

ಕನ್ನಡ ನವ್ಯ ಲೇಖಕಿಯರಿಗೆ ಕಾಮೂ, ಕಾಫ್ಕಾ, ಫ್ರಾಯ್ಡ್‌ರಂತಹ ಮನಃಶಾಸ್ತ್ರ ಚಿಂತಕರ ಹಾಗೂ ಕನ್ನಡ ನವ್ಯ ಲೇಖಕರಾದ ಲಂಕೇಶ್, ತೇಜಸ್ವಿ, ಕಂಬಾರ, ಅನಂತಮೂರ್ತಿ ಮೊದಲಾದವರ ಆಲೋಚನೆಗಳ ಪ್ರಭಾವವಿರುವುದು ಕಂಡುಬರುತ್ತದೆ. ವೀಣಾಶಾಂತೇಶ್ವರ, ಸಾರಾ ಅಬೂಬಕರ್, ವೈದೇಹಿ, ಜಾಹ್ನವಿ ಮೊದಲಾದ ಸ್ತ್ರೀವಾದಿ ಲೇಖಕಿಯರು ಸ್ವಚ್ಛಂದ ಪ್ರವೃತ್ತಿಯಲ್ಲಿ ತಮ್ಮ ಸ್ತ್ರೀ ಪಾತ್ರಗಳನ್ನು ಚಿತ್ರಿಸಿದ್ದಾರೆ. ಇವರ ಸ್ತ್ರೀ ಪಾತ್ರಗಳಲ್ಲಿ ಆಧುನಿಕ ಮನೋಧರ್ಮವಿರುವುದು ಗೋಚರವಾಗುತ್ತದೆ. ಮಾನಸಿಕ ದುರ್ಬಲತೆ, ದ್ವಂದ್ವತೆ, ಸಿನಿಕತನ, ಅಂತರ್ಮುಖತೆಗೆ ಸಂಪೂರ್ಣ ಒಳಗಾಗದೆ, ತಮ್ಮ ಅಸ್ತಿತ್ವ, ಚಹರೆ ಹಾಗೂ ಸ್ವತಂತ್ರವಾಗಿ ಬದುಕಲು ಹೋರಾಡುತ್ತವೆ. ಇವರ ಕೃತಿಗಳಲ್ಲಿ ಮನಃಶಾಸ್ತ್ರಕ್ಕೆ ಮತ್ತು ಅಸ್ತಿತ್ವವಾದಕ್ಕೆ ಸಂಬಂಧಿಸಿದಂತಹ ಚಿತ್ರಣಗಳನ್ನು ಕಾಣಬಹುದಾಗಿದೆ. ಸ್ತ್ರೀ ಸ್ವಾತಂತ್ರ್ಯತೆ ಸಮಾನತೆಯ ಕಾಳಜಿಯೊಂದಿಗೆ ಪುರುಷ ಪ್ರಧಾನ ವ್ಯವಸ್ಥೆಯ ಕಪಿಮುಷ್ಠಿಯಿಂದ ವೈಯುಕ್ತಿಕ ಹಾಗೂ ಸಾಮಾಜಿಕ ನೆಲೆಯಲ್ಲಿ ಬಿಡಿಸಿಕೊಳ್ಳಲು ಯತ್ನಿಸುವುದನ್ನು ಗುರುತಿಸಬಹುದಾಗಿದೆ. ಹಾಗೆಯೇ ಹೆಣ್ಣಿನ ಮಾನಸಿಕ ತೊಳಲಾಟ, ದ್ವಂದ್ವ, ಅಸಹಾಯಕತೆಯ ವಸ್ತುಸ್ಥಿತಿಯನ್ನೂ, ಮುಸ್ಲಿಂ ಸ್ತ್ರೀಯರ ಸಂವೇದನೆಯನ್ನು ನವ್ಯ ಲೇಖಕಿಯರ ಕಥಾಸಾಹಿತ್ಯದಲ್ಲಿ ವ್ಯಕ್ತವಾಗುವುದನ್ನು ಕಾಣಬಹುದಾಗಿದೆ.

ಎಂಭತ್ತರ ದಶತದ ನಂತರದ ಸಂದರ್ಭದಲ್ಲಿ ಕನ್ನಡದಲ್ಲಿ ಸ್ತ್ರೀವಾದಿ ವಿಮರ್ಶೆ, ಸ್ತ್ರೀ ಸಾಹಿತ್ಯ ಹಾಗೂ ಸ್ತ್ರೀತ್ವದ ವಿಚಾರಗಳ ಬಗ್ಗೆ ಗಂಭೀರ ಚರ್ಚೆಗಳು ಆರಂಭಗೊಂಡವು. ಗಂಡು-ಹೆಣ್ಣುಗಳ ಸಂಬಂಧದ ತಾತ್ವಿಕತೆಯ ಬಗ್ಗೆ ಗಂಭೀರವಾಗಿ ಪ್ರಶ್ನಿಸಲಾಯಿತು. ಈ ಹಿನ್ನೆಲೆಯಲ್ಲಿ ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ, ಬಿ.ಎನ್. ಸುಮಿತ್ರಾಬಾಯಿ,ವಿಜಯದಬ್ಬೆ, ಬಿ.ಎಸ್. ವೆಂಕಟಲಕ್ಷ್ಮಿ, ವೀಣಾ ಶಾಂತೇಶ್ವರ, ರಾಜಲಕ್ಷ್ಮಿ, ಸಾರಾ ಅಬೂಬಕರ್, ವೈದೇಹಿ ಮೊದಲಾದವರೂ ಸ್ತ್ರೀ ಸಮಸ್ಯೆಯ ಭಿನ್ನ ಆಯಾಮಗಳನ್ನು ಕುರಿತು ಚರ್ಚಿಸಿದ್ದಾರೆ. ಜ್ಞಾನ ವಿಸ್ತರಣೆಯಿಂದ ಹುಟ್ಟಿದ ಸ್ತ್ರೀತ್ವದ ಶೋಧನೆ, ಮನೋವಿಶ್ಲೇಷಣೆ, ಅಂತರ್ಮುಖತೆ, ಮಾನವ ಸಂಬಂಧಗಳ ಹುಡುಕಾಟ, ಸಮಾನತೆಯ ಶೋಧನೆಯ ನೆಲೆಯಲ್ಲಿ ಸೈದ್ಧಾಂತಿಕವಾಗಿ ಆಲೋಚಿಸಿದ್ದಾರೆ. ಮಹಿಳಾ ಶೋಷಣೆಯ ಒಳನೋಟಗಳನ್ನು ತಮ್ಮ ಕೃತಿಗಳಲ್ಲಿ ಬಿಚ್ಚಿಟ್ಟಿದ್ದಾರೆ. ಈ ಬಗೆಯ ಮಹಿಳಾ ಬದುಕಿನ ಸ್ಥಿತಿಗತಿಗಳನ್ನು ಅರಿಯುವ

ಅಲ್ಲಿನ ಸಮಸ್ಯೆಗಳಿಗೆ ಪರಿಹಾರಗಳನ್ನು ಶೋಧಿಸುವ ಚಿಂತನೆಗಳನ್ನು" **ಸ್ತ್ರೀವಾದಿ ಚಿಂತನೆ** " ಎಂದು ಕರೆಯಲಾಗಿದೆ. ಲಿಂಗವ್ಯವಸ್ಥೆಯನ್ನು ಜಾರಿಗೊಳಿಸುವ ಎಲ್ಲಾ ಬಗೆಯ ಮೌಲ್ಯ ಮತ್ತು ಚಿಂತನೆಗಳ ವಿರುದ್ಧ ಅಂದರೆ ಶೋಷಣಾತ್ಮಕ ವ್ಯವಸ್ಥೆಯ ವಿರುದ್ಧ ಸ್ತ್ರೀವಾದ ಹೋರಾಟ ನಡೆಸುತ್ತಾ ಬಂದಿದೆ. ಒಂದು ಚಳುವಳಿಯನ್ನೇ ರೂಪಿಸಿದೆ.

ದಲಿತ-ಬಂಡಾಯದ ಮನೋಧರ್ಮವೇ ಇಂದಿನ ಮಹಿಳಾ ಸಾಹಿತ್ಯದ ಮನೋಧರ್ಮವಾಗಿದ್ದರೂ, ಸ್ತ್ರೀವಾದಿ ಚಿಂತನೆಯನ್ನೇ ಪ್ರಧಾನ ನೆಲೆಯಾಗಿರಿಸಿಕೊಂಡಿದೆ. ಸ್ತ್ರೀ ಸಂವೇದನೆಯ ಜೊತೆಗೆ ಸಮಕಾಲೀನ ಸಮಾಜದ ವಿವಿಧ ಮಗ್ಗಲುಗಳನ್ನು ಇವರ ಕಥೆ, ಕಾದಂಬರಿ, ನಾಟಕ, ಕಾವ್ಯ ಹಾಗೂ ವಿಮರ್ಶಾಕೃತಿಗಳಲ್ಲಿ ಕಾಣಬಹುದಾಗಿದೆ. ಜಾಹ್ನವಿ, ನೇಮಿಚಂದ್ರ, ಆಶಾದೇವಿ, ಪ್ರತಿಭಾನಂದಕುಮಾರ್, ಹೆಚ್.ಎಲ್. ಪುಷ್ಪ, ವಿಜಯಾದಬ್ಬೆ, ಗಾಯಿತ್ರಿ, ಎಂ.ಆರ್.ಕಮಲ ಮೊದಲಾದ ಲೇಖಕಿಯರು ದಲಿತ ಸಂವೇದನೆ, ಮುಸ್ಲಿಂ ಮಹಿಳಾ ಸಂವೇದನೆ, ಲಿಂಗರಾಜಕಾರಣ ಹಾಗೂ ಸ್ತ್ರೀ ಮನಸ್ಸಿನ ಸೂಕ್ಷ್ಮಭಾವನೆಗಳನ್ನು ಕಲಾತ್ಮಕವಾಗಿ ನಿರೂಪಿಸಿದ್ದಾರೆ. ಜಾಗತೀಕರಣ ವಿರುದ್ಧದ ಪ್ರತಿಸಂಸ್ಕೃತಿಯ ಸಂವೇದನೆಗಳು, ಚಾರಿತ್ರಿಕ ಪ್ರಜ್ಞೆ, ಪ್ರಾದೇಶಿಕತೆ, ಬಂಡಾಯದ ಧೋರಣೆ, ಸ್ವಂತಿಕೆಯ ನಿಲುವುಗಳು ಇವರ ಸಾಹಿತ್ಯದ ಆಶಯಗಳಾಗಿವೆ.

ಸ್ತ್ರೀ ಸ್ವಂತಿಕೆ ಹಾಗೂ ಸ್ತ್ರೀ ಸಂವೇದನೆಯನ್ನು ತಮ್ಮ ಕತೆಗಳ ಮೂಲಕ ವ್ಯಕ್ತಪಡಿಸಿದ ಸಮಕಾಲೀನ ಲೇಖಕಿಯರಲ್ಲಿ ವೈದೇಹಿಯವರು ಪ್ರಮುಖರು. ಎಪ್ಪತ್ತರ ದಶಕದ ನವ್ಯ ಚಳವಳಿಯ ಸಂದರ್ಭದಲ್ಲಿ ವೈದೇಹಿಯವರು ಪ್ರಮುಖ ಕತೆಗಾರ್ತಿಯಾಗಿ ಹೊರಹೊಮ್ಮಿದವರು. ವ್ಯಂಗ್ಯ, ಸಿಟ್ಟು, ಸಿನಿಕತೆ, ಪ್ರತಿಭಟನೆಗಿಂತ ಹೆಚ್ಚಾಗಿ ಉತ್ಕಟ ಭಾವಶೀಲತೆಯ ಸ್ಪಂದನವೇ ವೈದೇಹಿಯವರ ಸಾಹಿತ್ಯದ ಮುಖ್ಯ ವೈಶಿಷ್ಟ್ಯವಾಗಿದೆ. ವೈದೇಹಿಯವರ **'ಮರಗಿಡಬಳ್ಳಿ', 'ಅಂತರಂಗದ ಪುಟಗಳು', 'ಗೋಲ', 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ', 'ಅಮ್ಮಚ್ಚಿಯೆಂಬ ನೆನಪು'** ಮತ್ತು **'ಕ್ರೌಂಚ ಪಕ್ಷಿಗಳು'** ಈ ಕಥಾಸಂಕಲನಗಳ ಹಲವು ಕತೆಗಳ ಕೇಂದ್ರ ವಸ್ತು ಸ್ತ್ರೀ ಮತ್ತು ಸ್ತ್ರೀ ಸಂವೇದನೆಗಳನ್ನು ಕುರಿತವುಗಳಾಗಿವೆ. ಅಲ್ಲದೆ, ಮಧ್ಯಮ ವರ್ಗದ ಕೌಟುಂಬಿಕ ಸಂಬಂಧಗಳು, ಬ್ರಾಹ್ಮಣ ಕುಟುಂಬದ ಸೂಕ್ಷ್ಮ ಬಗೆಯ ರಾಜಕಾರಣ ಹಾಗೂ ಹೆಣ್ಣಿನ ಸೂಕ್ಷ್ಮಬಗೆಯ ಭಾವನಾತ್ಮಕ ಸಂಘರ್ಷಗಳನ್ನು ಪ್ರಾದೇಶಿಕ ಭಾಷೆಯಲ್ಲಿ ನಿರೂಪಿಸುವ ವೈದೇಹಿಯವರ ಕತೆಗಳು ಓದುಗರ ಗಮನ ಸೆಳೆಯುತ್ತವೆ.

" .............. ನಮ್ಮ ಮನೆಯ ಒಳ ಅಂಗಳ ಅಂದರೆ ಅಮ್ಮನ ಸಾಮ್ರಾಜ್ಯ ಕಥಾನಕಗಳ ಆಗರವದು. ಎಷ್ಟು ಜನ ಬರುತ್ತಿದ್ದರು, ಸುಖ-ದುಃಖ, ಕಥನ, ಹಾಡು, ಹಸೆ, ಅದೊಂದು ಮನುಷ್ಯ ಲೋಕದ ದೊಡ್ಡ ದರ್ಶನ ಎಂತಲೇ ಬರೆಯಲು ಹೊರಟ ನನಗೆ ಸಣ್ಣಕತೆಯೇ ಒಂದು ಸಾಧನವಾಗಿ ಸಿಕ್ಕಿತೇನೋ"[5] ಎಂದು ಹೇಳುವ ವೈದೇಹಿಯವರ ಮಾತುಗಳಲ್ಲಿ ಸ್ತ್ರೀಲೋಕದ ಸೂಕ್ಷ್ಮಗಳನ್ನು ಗಮನಿಸಬಹುದಾಗಿದೆ.

" ಶತಮಾನಗಳಿಂದ ಗಂಡು-ಹೆಣ್ಣು ಕೂಡಿ ಬದುಕಿರುವುದು ಅವರಿಬ್ಬರಿಗೂ ಪರಿಚಿತವಾದ ಒಂದು ಸಾಮಾನ್ಯ ಪ್ರಪಂಚವಿದ್ದಂತೆ, ಹೆಣ್ಣಿಗೆ ಅವಳದೇ ಆದ ಭೌತಿಕ, ಮಾನಸಿಕ, ಭಾವುಕ ಪ್ರಪಂಚವು ಉಳಿಯಿತು. ಆದುದರಿಂದ ಮಹಿಳೆಯ ಸ್ಪಂದನೆಯ ಗ್ರಹಿಕೆಯ ಸ್ವೀಕಾರದ ಲಯ-ಗತಿ-ತೀವ್ರತೆಗಳು ಭಿನ್ನವಾದವು. ಈ ಭಿನ್ನತೆ ಬದುಕನ್ನು ನೋಡುವ ಅವಳ ದೃಷ್ಟಿಕೋನಕ್ಕೂ ಒಂದು ವಿಶಿಷ್ಟತೆಯನ್ನು ತಂದುಕೊಟ್ಟಿದೆ."[6] ಎನ್ನುವ ವಿಜಯದಬ್ಬೆಯವರ ಅಭಿಪ್ರಾಯಗಳು ವೈದೇಹಿಯವರ ಕತೆಗಳಲ್ಲಿ ಚಿತ್ರಿತವಾಗಿರುವ ಪಾತ್ರಗಳಿಗೂ ಅನ್ವಯಿಸುತ್ತದೆ.

ಕನ್ನಡ ಕಥನ ಸಾಹಿತ್ಯದಲ್ಲಿ ತೀವ್ರವಾಗಿ ತೊಡಗಿಸಿಕೊಂಡಿರುವ ವೈದೇಹಿಯವರು ಅಪಾರ ವೈವಿಧ್ಯತೆಗಳನ್ನು ತಮ್ಮ ಕಥಾ ಜಗತ್ತಿನಲ್ಲಿ ಅಳವಡಿಸಿಕೊಂಡಿದ್ದಾರೆ. ಗ್ರಾಮೀಣ ಬದುಕು, ಕೌಟುಂಬಿಕ ಜೀವನ, ಹೆಣ್ಣು-ಗಂಡುಗಳ ನಡುವಿನ ಸಂಬಂಧದ ತಾಕಲಾಟಗಳು, ಆಧುನಿಕ ಬದುಕು ತಂದೊಡ್ಡುವ ಸ್ಥಿತ್ಯಂತರಗಳ ಚಿತ್ರಣವಿರುವುದನ್ನು ಕಾಣಬಹುದಾಗಿದೆ. ವೈದೇಹಿಯವರ ಕತೆಗಳು ನಮ್ಮ ಸಿದ್ಧ ಪರಿಕಲ್ಪನೆಯನ್ನು ಬದಲಿಸುತ್ತವೆ. **'ಗೋಲ'** ಮೊದಲಾದ ಕಥಾಸಂಕಲನದಲ್ಲಿನ ಕತೆಗಳ ವೈಶಿಷ್ಟ್ಯವಿರುವುದು ವಿಭಿನ್ನ ವರ್ಗ, ಸ್ಥರಗಳ ಹೆಂಗಸರ ಅಂತರಂಗದ ಬದುಕನ್ನು ಚಿತ್ರಿಸುವಲ್ಲಿ. ಅಲ್ಲಿ ಗಂಡು-ಹೆಣ್ಣುಗಳನ್ನು ಮುಖಾಮುಖಿಯಾಗಿಸುವುದಕ್ಕಿಂತ ಹೆಚ್ಚಾಗಿ ಒಟ್ಟು ಸಾಮಾಜಿಕ, ಕೌಟುಂಬಿಕ ನೆಲೆಯಲ್ಲಿ ಸ್ತ್ರೀಯ ಶೋಷಣೆಗಳ ಹಲವು ಮುಖಗಳನ್ನು ಕಾಣಬಹುದಾಗಿದೆ. ಈ ದೃಷ್ಟಿಯಿಂದ ಅವರ **'ಅಕ್ಕು'** , **'ಒಂದು ಅಪರಾಧದ ತನಿಖೆ', 'ಗುಲಾಬಿಯ ಟಾಕೀಸು ಮತ್ತು ಸಣ್ಣ ಅಲೆಗಳು', 'ಗೂಡಿನೊಳಗೆ ಒಂದು ಹಕ್ಕಿ', 'ಶೋಧ'** ಮೊದಲಾದ ಕತೆಗಳು ಮುಖ್ಯವಾಗುತ್ತವೆ. ಈ ಹಿನ್ನೆಲೆಯಲ್ಲಿ 'ವೈದೇಹಿಯವರ ಕತೆಗಳಲ್ಲಿ ಸ್ತ್ರೀ ಸ್ವಾತಂತ್ರ್ಯದ ಕಲ್ಪನೆ'ಯನ್ನು ಮುಖ್ಯ ಕೇಂದ್ರವಾಗಿರಿಸಿಕೊಂಡು ಈ ಅಧ್ಯಯನ ಚರ್ಚಿಸುತ್ತದೆ.

ವೈದೇಹಿಯವರ ಕತೆಗಳಲ್ಲಿ ಸ್ತ್ರೀಯರ ಅನುಭವ ಲೋಕವನ್ನು ಸಮಾಜದ ಗಮನಕ್ಕೆ ತರುವ ಆಶಯವಿದೆ. ಸ್ತ್ರೀವಾದಿ ಚಿಂತಕಿ ಸುಮಿತ್ರಬಾಯಿಯವರು ಹೇಳುವಂತೆ " ಹೆಣ್ಣಿನ ಅನುಭವದ ನೆಲೆಯಿಂದ ಬದುಕಿನತ್ತ ಪರಿಶೀಲನಾತ್ಮಕವಾಗಿ ನೋಡುವ ಕಾಳಜಿ " ಯೊಂದು ಈ ಲೇಖಕಿಯ ಒಂದು ಪ್ರಮುಖ ಆಸಕ್ತಿಯಾಗಿ ಕಾಣಿಸಿಕೊಂಡಿದೆ. ಈ ಸ್ತ್ರೀ ವಿಶಿಷ್ಟ ದೃಷ್ಟಿಕೋನದಿಂದ ಒಂದು ರೀತಿಯ ಅನನ್ಯತೆಯೂ ಅವರ ಕತೆಗೆ ಬಂದಿದೆ. ಹೆಣ್ಣಿನ ಬಗೆಗಿನ ರೂಢಿಗತ ನಂಬಿಕೆ, ಕಲ್ಪನೆ, ಗ್ರಹಿಕೆಗಳನ್ನು ವೈದೇಹಿ ನಿರಾಯಾಸವಾದ ರೀತಿಯಲ್ಲಿ ತೀರಾ ಸಹಜವಾಗಿ ಎಂಬಂತೆ ಬುಡಮೇಲು ಮಾಡಿಬಿಡುತ್ತಾರೆ. ಹಾಗೆಯೇ ಹೆಣ್ಣಿನ ವ್ಯಕ್ತಿತ್ವ ಸಾಮರ್ಥ್ಯದ ಬಗ್ಗೆ ತುಂಬ ವಿಶ್ವಾಸವಿದೆ. ಅವರು ತಮ್ಮ ಕತೆಗಳಲ್ಲಿ ಹೆಂಗಸರನ್ನು ವ್ಯಂಗ್ಯ, ಹಾಸ್ಯ ಧೋರಣೆಯಿಂದ ನೋಡುವಂತೆ ಕಂಡರೂ ಅದು ಪುರುಷ ದೃಷ್ಟಿಕೋನವನ್ನು ಟೀಕಿಸುವ ಉದ್ದೇಶವಿದೆಯೇ ಹೊರತು ಹೆಂಗಸನ್ನು ಹೀಗಳೆಯುವಂಥದ್ದಲ್ಲ.

ಸಂದರ್ಶನವೊಂದರಲ್ಲಿ ವೈದೇಹಿಯವರೇ ಹೀಗೆ ಹೇಳಿದ್ದಾರೆ: " ನಮ್ಮ ಅನನ್ಯತೆ ನಮಗಿದೆ. ನಾವು ಅದನ್ನು ಉಳಿಸಿಕೊಳ್ಳಬೇಕು. ನಮ್ಮ ಪ್ರಪಂಚದ ಬಗ್ಗೆ ಕೀಳರಿಮೆ ಅಗತ್ಯವಿಲ್ಲ. ಅವರು ನಮ್ಮಂತಾಗಲಿ, ನಾವು ಅವರಂತಾಗುವ ಅಗತ್ಯವಿಲ್ಲ. ಎನ್ನುವವರೆಗೂ ಸ್ತ್ರೀಲೋಕ ಸತ್ವಶಾಲಿ, ನಾವು ನಮ್ಮಂತೆ, ನಮ್ಮ ಉದ್ದಗಲದ ಮಿತಿಯಂತೆ ಬದುಕಲು ಸಾಧ್ಯವಾದರೆ ಸಾಕು "[2] ಎಂದು ಸ್ತ್ರೀಸ್ವಂತಿಕೆಯ ಬಗ್ಗೆ ತಮ್ಮದೇ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಪಿತೃ ಪ್ರಧಾನತೆಯು ಈ ಬಗೆಯ ಚಾರಿತ್ರಿಕ ನಿರ್ಮಿತಿಯಾಗಿರುವುದರಿಂದಲೇ ಎಲ್ಲ ಸಮಾಜಗಳಲ್ಲೂ ಲಿಂಗ ಸಮಾನ ಗುಣಲಕ್ಷಣವನ್ನಾಗಲಿ, ಐತಿಹಾಸಿಕ ಐಕ್ಯತೆಯನ್ನಾಗಲಿ ಹೊಂದಿಲ್ಲ. ಸ್ತ್ರೀಯ ಅಧಿಕಾರ ನಿರಾಕರಣೆ, " ಅವಕಾಶ ವಂಚಿತ " ಅವಲಂಬಿತ ಸ್ಥಿತಿ ಹಾಗೂ ಅವಹೇಳನಕಾರಿ ಸ್ಥಾನಮಾನಗಳು ಎಲ್ಲ ಪಿತೃಪ್ರಧಾನ ಸಮಾಜಗಳಲ್ಲೂ ಸರ್ವ ಸಾಮಾನ್ಯವಾಗಿದೆ. ಆದರೆ ' ಸ್ವಪ್ರಜ್ಞೆ' ಯನ್ನು ಹೆಣ್ಣು ಅವಳ ಹೋರಾಟಗಳ ಮೂಲಕ

ತನ್ನದೇ ಆದ ಮೂರ್ತ-ಅಮೂರ್ತ ರೂಪಗಳಲ್ಲಿ ಸಣ್ಣ ಗೆಲುವಿನಲ್ಲಿ ಮತ್ತು ದೊಡ್ಡ ಸೋಲಿನಲ್ಲಿ ಕಂಡುಕೊಳ್ಳುವುದನ್ನು ವೈದೇಹಿಯವರ ಕತೆಗಳಲ್ಲಿ ಕಾಣಬಹುದಾಗಿದೆ. ಹೆಣ್ಣಿನ ಸಮಸ್ಯೆಗಳಲ್ಲಿ ಏಕರೂಪತೆ ಇದೆಯೇ ಹೊರತು ಪರಿಹಾರಗಳಲ್ಲಿ ಏಕರೂಪತೆ ಇಲ್ಲ ಎನ್ನುವುದನ್ನು ಅವರ ಕತೆಗಳು ಮನಗಾಣಿಸುತ್ತವೆ. ಇಲ್ಲೆಲ್ಲಾ ಸ್ತ್ರೀಯ ಶೋಷಿತ ಸ್ತರಗಳನ್ನು ಮಾತ್ರ ವಿವರಿಸದೆ, ಸ್ತ್ರೀಯೊರ್ವಳ ಪ್ರತಿಭಟನೆಯ ವಿಭಿನ್ನ ನೆಲೆಗಳು ಅವರ ಕತೆಗಳಲ್ಲಿ ಸೌಮ್ಯವಾಗಿ ಆದರೆ ಸ್ಪಷ್ಟವಾಗಿ ಗೋಚರಿಸುತ್ತವೆ. ಮಹಿಳೆಯರ ಮನಸ್ಸಿನ ಭಾವನೆಗಳನ್ನು ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ವೈದಿಕ ಸಮಾಜದ ಸ್ತ್ರೀ ಜಗತ್ತನ್ನು ಅವರ ಕತೆಗಳು ಅನಾವರಣಗೊಳಿಸುತ್ತವೆ. ಗಂಡು-ಹೆಣ್ಣಿನ ಮುಖಾಮುಖಿ, ಕೌಟುಂಬಿಕ ಬಿಕ್ಕಟ್ಟು, ಸಂಘರ್ಷ ಈ ನೆಲೆಯಲ್ಲಿ ವ್ಯಕ್ತವಾಗುವ ಗಂಡಿನ ನಕಾರಾತ್ಮಕ ಪ್ರತಿಕ್ರಿಯೆ, ಹೆಣ್ಣಿನ ಸೂಕ್ಷ್ಮ ಪ್ರತಿಭಟನೆಗಳು, ಹೆಣ್ಣಿನ ಭಾವನಾತ್ಮಕತೆಯ ಒಳಪದರಗಳನ್ನು ಅವರ ಕತೆಗಳು ಪರಿಶೀಲಿಸುತ್ತವೆ.

ಇಲ್ಲಿ ಸ್ತ್ರೀ ವಿಶಿಷ್ಟ ಸಂವೇದನೆಯನ್ನು ಆಲೋಚನಾ ಕ್ರಮವನ್ನು, ಕನಸುಗಳನ್ನು ನಾವು ಗುರುತಿಸಬಹುದಾಗಿದೆ. ಸಂಪ್ರದಾಯನಿಷ್ಠೆ, ಹಿರಿಮೆಗಳಿಗೆ ಬದ್ಧರಾಗಿರುವ ಹಳೆ ತಲೆಮಾರಿನ ಮಹಿಳೆಯರ ಚಿತ್ರಣವಿದೆ. ಹಾಗೆಯೇ, ಹೊಸ ಬದುಕಿಗೆ, ಜೀವನ ಕ್ರಮಕ್ಕೆ ತೆರೆದುಕೊಳ್ಳಲು ಹಪಹಪಿಸುವ ಯುವತಿಯರ ಚಿತ್ರಣವೂ ಇದೆ. ಹಾಗೂ ಕೌಟುಂಬಿಕ ಚೌಕಟ್ಟಿನಲ್ಲಿ ಪಿತೃಪ್ರಧಾನ ಸಮಾಜದ ಮೌಲ್ಯಗಳಿಂದ ಶೋಷಿತರಾಗಿ, ಇಕ್ಕಟ್ಟಿನಲ್ಲಿ ಸಿಲುಕಿದ ದ್ವಂದ್ವಗಳಿಂದ ತೊಳಲಾಡುವ ಗೃಹಿಣಿಯರೂ ಇಲ್ಲಿ ಕಂಡು ಬರುತ್ತಾರೆ. ವೈದೇಹಿಯವರ ಕಥಾ ಜಗತ್ತು ಮಧ್ಯಮ ವರ್ಗದ ವೈದಿಕ ಮನೆತನದ ಆವರಣದಲ್ಲೇ ಹುಟ್ಟಿಕೊಂಡಿದ್ದಾಗಿದೆ. ಅಲ್ಲಿಯ ಜೀವನ ಕ್ರಮದಲ್ಲಿ ಮಹಿಳೆಯ ಸ್ಥಿತಿ-ಗತಿಗಳನ್ನು ಅದರ ಸೂಕ್ಷ್ಮತೆ ಹಾಗೂ ಸಂಕೀರ್ಣತೆಗಳನ್ನು ಲೇಖಕಿ ಹೇಗೆ ನಿರೂಪಿಸಿದ್ದಾರೆ ಎಂಬುದನ್ನು ಈ ಅಧ್ಯಯನ ಪರಿಶೀಲಿಸುತ್ತದೆ.

ಗಂಡು-ಹೆಣ್ಣಿನ ಸಂಬಂಧದ ಕುರಿತು ಮೂಲಭೂತ ಪ್ರಶ್ನೆಗಳನ್ನು, ಸಂಬಂಧಗಳ ವಿಭಿನ್ನ ಮಗ್ಗುಲುಗಳನ್ನು ವೈದೇಹಿಯವರ ಕತೆಗಳು ಶೋಧಿಸುತ್ತವೆ. ತನಗೆ ಬೇಕಾದ ಗಂಡಿನ ಆಯ್ಕೆಯ ಸ್ವಾತಂತ್ರ್ಯವನ್ನು ಇಲ್ಲಿನ ಸ್ತ್ರೀಪಾತ್ರಗಳಲ್ಲಿ ಕಾಣಬಹುದಾಗಿದೆ. **'ಅಂತರಂಗದ ಪುಟಗಳು'**, **'ಭೂತ'**, **'ಅಕ್ಕು'**, **'ಸೌಗಂಧಿಯ ಸ್ವಗತಗಳು'** ಮೊದಲಾದ ಕತೆಗಳಲ್ಲಿ ಹೆಣ್ಣಿನ ಆಯ್ಕೆಯ ಪ್ರಶ್ನೆಗಳು ಹಾಗೂ ಸ್ವಂತಿಕೆಯ ನೆಲೆಗಳನ್ನು ಮುಖ್ಯ ಕೇಂದ್ರವಾಗಿರಿಸಿಕೊಂಡು ಈ ಅಧ್ಯಯನ ಚರ್ಚಿಸಲು ಯತ್ನಿಸುತ್ತದೆ.

ವೈದೇಹಿಯವರ ಕತೆಗಳ ವಸ್ತುವನ್ನು ಆಧಾರವಾಗಿಟ್ಟುಕೊಂಡು ಎರಡು ವಿಭಾಗ ಮಾಡಬಹುದಾಗಿದೆ.

೧. ಸ್ತ್ರೀ ಲೋಕದ ಸೂಕ್ಷ್ಮಗಳ ಹುಡುಕಾಟ.

೨. ಬದುಕಿನ ಹೋರಾಟವನ್ನು ಹೆಣ್ಣು ಎದುರಿಸುವ ಬಗೆ.

ಮೊದಲನೆಯ ವಿಚಾರಕ್ಕೆ ಸಂಬಂಧಪಟ್ಟಂತೆ **" ಮದುವೆ ಹೆಣ್ಣು ಸೀರೆ " "ನಮ್ಮ ಶಾಂತಿಯ ಬಯಕೆ" "ಪ್ರಶ್ನೋತ್ತರಗಳ ಆಚೆ" "ಗುಲಾಬಿ ಮೃದು ಪಾದಗಳು" "ಒಲೆಕಾರನ ಡೈರಿಯಿಂದ" "ತೆರೆಯದ ಪುಟಗಳು"** ಮೊದಲಾದ ಕತೆಗಳನ್ನು ಮುಂದಿನ ಅಧ್ಯಾಯಗಳಲ್ಲಿ ಪರಿಶೀಲಿಸಲಾಗಿದೆ.

ವೈದೇಹಿಯವರು ತಮ್ಮ ಕತೆಗಳ ಮೂಲಕ ಸ್ತ್ರೀ ಸಂವೇದನೆಯ ಹೊಸ ಹುಡುಕಾಟಗಳನ್ನು ದಾಖಲಿಸುತ್ತಾರೆ. "ಇವರ ಎಲ್ಲಾ ಕತೆಗಳ ಹಿಂದೆ **'ಗಂಡು', 'ಹೆಣ್ಣು'** ಗಳು ಕೂಡಿರುವ ಒಂದು ಲೋಕವಿದೆ. ಆ ಲೋಕದಲ್ಲಿ ಮಿಥುನವಿರುವಂತೆಯೇ ವಿಚ್ಛೇದವೂ ಇದೆ. ಸ್ವಾರಸ್ಯದ ಮಾತುಗಾರಿಕೆಯಿರುವಷ್ಟೇ ಗಾಢವಾದ ವಿಷಾದದ ಮಂದ್ರಸ್ಥಾಯಿಯೂ ಇದೆ. ಇಲ್ಲಿ ಉಲ್ಲಾಸದ ಉಬ್ಬರ ಕೆಲವೊಮ್ಮೆ ಮೊರೆದು ಕಾಣಿಸಿಕೊಂಡರೆ ಕೆಲವೊಮ್ಮೆ ಹಿಂಸೆಯ ನೆರಳು ಚಾಚಿಕೊಳ್ಳುತ್ತದೆ. ಪಾತ್ರಗಳಲ್ಲಿ ಸನ್ನಿವೇಶಗಳಲ್ಲಿ ಮತ್ತು ಇಡಿಯ ಕಥನ ಕ್ರಮದಲ್ಲಿ ಹೀಗೆ, ವಿರುದ್ಧಭಾವಗಳನ್ನು ಮಿಥುನಗೊಳಿಸಿ ಕಾಣಿಸುವ ಒಂದು ವಿಶಿಷ್ಟ ಕಲೆಗಾರಿಕೆ ಪ್ರಾಯಶಃ ವೈದೇಹಿಯವರ ಕತೆಗಳಲ್ಲಿ ಪ್ರಮುಖವಾದದ್ದು."[೮] ಎಂದು ಕೆ.ವಿ. ಅಕ್ಷರ ಅವರು ಅಭಿಪ್ರಾಯ ಪಡುತ್ತಾರೆ.

ಡಾ. ಗಾಯತ್ರಿನಾವಡ ಅವರು ಹೇಳುವಂತೆ, "ಮಹಿಳಾ ಲೋಕವನ್ನು ಗ್ರಹಿಸುವ ಬಗೆ ಇಂದು ಬದಲಾಗುತ್ತಿದೆ. ಹೆಣ್ಣಿನ ಬದುಕನ್ನು ಕುರಿತು ಚಿಂತಿಸುವ, ಶೋಧಿಸುವ ಮತ್ತು ಕಟ್ಟುವ ಪ್ರಯತ್ನ ನಡೆಯುತ್ತಿದೆ. ಲಿಂಗಸಮಾನತೆ ಸ್ಥಾಪಿಸುವ ಕಾಳಜಿ ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ ಅಷ್ಟೇ ಅಲ್ಲ ವೈಯಕ್ತಿಕ ನೆಲೆಯಲ್ಲೂ ಪ್ರಕಟವಾಗುತ್ತಿದೆ. ಈ ಎಲ್ಲ ಪ್ರಯೋಗ, ಪ್ರಕ್ರಿಯೆಗಳು ಮಹಿಳಾ ಸ್ಪಂದನದ ಪರಿಸರ ನಿರ್ಮಾಣ ಮಾಡುವಲ್ಲಿ ಒಂದಷ್ಟು ಯಶಸ್ವಿಯಾಗಿದೆ. ಇದು ಎಲ್ಲ ಸ್ತ್ರೀಪರ ಮನಸ್ಸುಗಳಿಗೆ ತಂದಿತ್ತ ಸಂಗಾತಿ."[೯]

ಎರಡನೆಯ ವಿಚಾರಕ್ಕೆ ಸಂಬಂಧಪಟ್ಟಂತೆ **"ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು", "ಹಕ್ಕಿಲ್ಲದವರು", "ಅವಲಂಬಿತರು "ಶಕುಂತಲೆಯೊಂದಿಗೆ ಕಳೆದ ಅಪರಾಹ್ನ", "ಒಂದು ಅಪರಾಧ ತನಿಖೆ" ,"ಚಿಪ್ಪು" , "ಬೀಳು-ಬೇರು"** ಮೊದಲಾದ ವೈದೇಹಿಯವರ ಕತೆಗಳನ್ನು ಪರಿಶೀಲಿಸಬಹುದಾಗಿದೆ. ಇಲ್ಲಿಯ ಹೆಂಗಸರು ಬದುಕಿನ ಹಲವು ಕಷ್ಟಗಳಿಗೆ, ಹಲವು ಪರಿಸ್ಥಿತಿಗಳಿಗೆ ತಮ್ಮನ್ನು ತೊಡಗಿಸಿಕೊಂಡ ರೀತಿಯನ್ನು ಕಾಣಬಹುದಾಗಿದೆ. ಬದುಕಿನ ಹಲವು ಸನ್ನಿವೇಶಗಳನ್ನು ತಮ್ಮ ದಿಟ್ಟತನದಿಂದ ಎದುರಿಸುವ ಹೆಣ್ಣುಗಳ ಚಿತ್ರಣವಿದೆ. ಅದೇ ರೀತಿ ಪುರುಷ ರೂಪಿ ಸಮಾಜದ ರೀತಿ ನೀತಿಗಳನ್ನು ಎದುರಿಸಲಾಗದೆ ಅದನ್ನು ಒಪ್ಪಿಕೊಂಡು ಬದುಕುವುದನ್ನೂಇಲ್ಲಿ ಕಾಣಬಹುದಾಗಿದೆ.

ಯಾವುದೇ ಬಗೆಯ ಲಿಂಗ ವಿವಕ್ಷೆಗೆ ಹೊರಡದ ಸ್ತ್ರೀಯನ್ನು ಒಬ್ಬ ವ್ಯಕ್ತಿಯಾಗಿ, ವ್ಯಕ್ತಿತ್ವದ ಎಲ್ಲ ಶಕ್ತಿ, ಮಿತಿ, ಸಾಧ್ಯತೆಗಳೊಂದಿಗೆ ಗುರುತಿಸುವ ಮಾದರಿಯ ಸ್ತ್ರೀಪಾತ್ರ ರಚನೆಗಳನ್ನು ವೈದೇಹಿಯವರ ಕತೆಗಳಲ್ಲಿ ನಿರೂಪಿತಗೊಂಡಿದೆ. ಲಿಂಗಾಧಾರಿತ ಶೋಷಣೆಯನ್ನು ಸೂಕ್ಷ್ಮಾತೀಸೂಕ್ಷ್ಮ ಒಳದನಿಗಳೊಂದಿಗೆ ಚಿತ್ರಿಸಿ ತೋರಿಸುತ್ತಾರೆ. ಪೂರ್ವ ಗ್ರಹಗಳಿಲ್ಲದೆ ತೆರೆದ ಕಣ್ಣಿನಿಂದ ಪ್ರಪಂಚವನ್ನು ನೋಡುವುದನ್ನು, ನೋಡಿದ್ದನ್ನೇ ಬಣ್ಣ ಹಚ್ಚದೆ ವಾಸ್ತವ ನೆಲೆಯಲ್ಲಿ ಬರೆಯುವುದು ವೈದೇಹಿಯವರ ಕತೆಗಳ ವೈಶಿಷ್ಟ್ಯವಾಗಿದೆ.

ಕುಟುಂಬ ಎನ್ನುವುದು ಹೆಣ್ಣು-ಗಂಡು ಇಬ್ಬರಿಗೂ ಸೇರಿದ್ದು. ಇಬ್ಬರಿಗೂ ಸಮಾನ ಜವಾಬ್ದಾರಿ ಇದೆಯಷ್ಟೆ. ಆದರೆ ಕುಟುಂಬ, ತಾಯ್ತನದೊಂದಿಗೆ ಹೆಣ್ಣಿಗೆ ಹೇರಲಾದ ಜವಾಬ್ದಾರಿಗಳು ಎಷ್ಟು ಲಿಂಗನೆಲೆಯನ್ನು ಹೊಂದಿವೆ ಎನ್ನುವುದನ್ನು ಹಾಗೂ ಇಂತಹ ಲಿಂಗಸೂಕ್ಷ್ಮಗಳನ್ನು ವೈದೇಹಿಯವರ ಕಥೆಗಳು ಪ್ರಶ್ನಿಸುತ್ತವೆ. ಪುರಾಣ, ಇತಿಹಾಸಗಳಲ್ಲಿ ಮಹಿಳಾ ದಮನಕ್ಕೆ ಲಿಂಗನೆಲೆಯ ಆಯಾಮವಿರುವುದನ್ನು, ಅಲ್ಲಿನ ಸಂಕೀರ್ಣತೆಯನ್ನು ಇವರ ಕೆಲವು ಕತೆಗಳಲ್ಲಿ ಗುರುತಿಸಬಹುದಾಗಿದೆ.

ಇತ್ತೀಚಿನ ದಶಕಗಳಲ್ಲಿ ಪುರಾಣ ಮತ್ತು ಪ್ರಾಚೀನ ಮಹಾಕಾವ್ಯಗಳ ಸ್ತ್ರೀ ಪಾತ್ರಗಳನ್ನು ಅವರ ಕಾಲದೇಶಗಳಿಂದ ಬಿಡುಗಡೆಗೊಳಿಸಿ, ಅವರ ಮೂಲಕ ತಮ್ಮ ಆಧುನಿಕ ಸಂವೇದನೆಯನ್ನು ಬಿಂಬಿಸುವ ಸಾಹಿತ್ಯ ರಚನೆಗಳು ಬಂದಿದೆ. ಇಲ್ಲಿ ಸೀತೆ, ಅಹಲ್ಯೆ, ದ್ರೌಪದಿ, ಶಾಕುಂತಲೆ ಮೊದಲಾದವರಿಗೆ ಹೊಸ ದನಿ ಕೊಡಲಾಗಿದೆ. ಪುರಾಣ ಹಾಗೂ ಇತಿಹಾಸದ ಸ್ತ್ರೀ ಪಾತ್ರಗಳನ್ನು ಆಯ್ದುಕೊಂಡು ಅವುಗಳನ್ನು ಸ್ತ್ರೀವಾದಿ ನೆಲೆಯಿಂದ ನೋಡಿದ್ದಾರೆ. ಸ್ತ್ರೀ ಸಂವೇದನೆಯನ್ನು ಮರು ಚಿಂತನೆಗೆ ಒಳಪಡಿಸಿದ್ದಾರೆ. ಪುರಾಣೇತಿಹಾಸಗಳ ಸ್ತ್ರೀ ಮಾದರಿಗಳನ್ನು ಭಿನ್ನಗೊಳಿಸುವುದರ ಜೊತೆಗೆ ಪುನರ್ ವ್ಯಾಖ್ಯಾನಿಸುವ ಪ್ರಯತ್ನ ಮಾಡಿದ್ದಾರೆ. ಉದಾಹರಣೆಗೆ ವೈದೇಹಿಯವರ " **ಶಕುಂತಲೆಯೊಂದಿಗೆ ಕಳೆದ ಅಪರಾಹ್ನ** " ಎಂಬ ಕಥೆಯಲ್ಲಿ ತನ್ನನ್ನು ಸ್ವೀಕರಿಸಲು ಬಂದ ದುಶ್ಯಂತನನ್ನು ತನಗಾತನೇ ಅನಿವಾರ್ಯವಾದರೂ ಆತನಿಗೆ ತಾನು ಅನಿವಾರ್ಯಳಲ್ಲ ಎಂಬ ಕಾರಣಕ್ಕೆ ನಿರಾಕರಿಸುವ ಶಕುಂತಲೆ ಹೊಸ ಆಲೋಚನೆಗಳ ಪ್ರತೀಕವಾಗಿ ತೋರುತ್ತಾಳೆ.

ಈ ಹಿನ್ನೆಲೆಯಲ್ಲಿ ವೈದೇಹಿಯವರ ಕತೆಗಳ ಸ್ತ್ರೀ ಜಗತ್ತನ್ನು ಎರಡು ನೆಲೆಗಳಿಂದ ನೋಡಬಹುದಾಗಿದೆ.

೧. ಬದಲಾದ ಕಾಲಮಾನದಲ್ಲಿ ತನ್ನ ನಂಬಿಕೆ, ಶ್ರದ್ಧೆ ಮತ್ತು ಆಚರಣೆಗಳನ್ನು ಊರ್ಜಿತಗೊಳಿಸಲಾಗದೆ, ಬಾಹ್ಯ ಚಿಂತನೆಗಳನ್ನು ಅನಿವಾರ್ಯವಾಗಿಯೋ, ಜನ್ಮಾಂತರದ ಶಿಕ್ಷೆಯ ಮೂಲಕವೋ ಒಪ್ಪಿಕೊಳ್ಳುವ ಸ್ತ್ರೀ ಮಾದರಿಗಳು.

೨. ಪಿತೃ ಪ್ರಧಾನ ಸಮಾಜದ ಚಿಂತನೆಯ ಎಲ್ಲ ತರ್ಕಗಳಿಗೂ ಅತೀತವೆಂಬಂತೆ ಬದುಕನ್ನು ಆಯ್ದುಕೊಂಡು ನಿಷ್ಠೆಯಿಂದ ಅದನ್ನೇ ನೆಚ್ಚಿ ಬದುಕಿದ ಸ್ತ್ರೀ ಮಾದರಿಗಳು.

" ಸ್ತ್ರೀವಾದಿ ಧೋರಣೆ ಎಂಬುದು ಇಲ್ಲಿ ಕಥನದ ನೇಯ್ಗೆಯಲ್ಲಿ ಮತ್ತು ಕೇಂದ್ರ ಪಾತ್ರದ ನಿರೂಪಣೆಯಲ್ಲೇ ಅಂತರ್ಗತವಾಗಿದ್ದು ಎಲ್ಲೂ ಅದು ಬುದ್ಧಿಪೂರ್ವಕವಾಗಿ ಮೇಲಿನಿಂದ ಸೇರಿಸಿದಂತೆ ಅನ್ನಿಸುವುದಿಲ್ಲ"[6] ಎನ್ನುವ ಶಾಂತಿನಾಥ ದೇಸಾಯಿಯವರ ಅಭಿಪ್ರಾಯವನ್ನು ವೈದೇಹಿಯವರ ಎಲ್ಲ ಕತೆಗಳಿಗೂ ಅನ್ವಯಿಸಿ ನೋಡಬಹುದಾಗಿದೆ.

**" ವೈದೇಹಿಯವರ ಕತೆಗಳಲ್ಲಿ ಸ್ತ್ರೀಸ್ವಾತಂತ್ರ್ಯದ ಕಲ್ಪನೆ "** ಹೇಗೆ ಅಭಿವ್ಯಕ್ತಗೊಂಡಿವೆ ಎಂಬುದನ್ನು ವಸ್ತುನಿಷ್ಠವಾಗಿ ಈ ಅಧ್ಯಯನ ಶೋಧಿಸಲು ಯತ್ನಿಸುತ್ತದೆ. ಸ್ತ್ರೀಸ್ವತಂತ್ರ್ಯತೆ ಮತ್ತು ಆರ್ಥಿಕ ಸಮಾನತೆಯಂತಹ ಆಶಯಗಳು, ಸ್ತ್ರೀಸ್ವತಂತ್ರ್ಯತೆ ಮತ್ತು ಸಮಾನತೆ, ಸ್ತ್ರೀಸ್ವತಂತ್ರ್ಯತೆ ಹಾಗೂ ಸಾಂಪ್ರದಾಯಿಕ ಮೌಲ್ಯಗಳ ಸ್ವೀಕರಣೆ–ನಿರಾಕರಣೆಯ ಆಶಯಗಳು ಬದುಕಿನ ಸಾಮರಸ್ಯದ ಹಂಬಲ ಹಾಗೂ ಜೀವನ ಪ್ರೀತಿ ಮೊದಲಾದ ನೆಲೆಗಳಲ್ಲಿ ಅವರ ಕತೆಗಳನ್ನು ಚರ್ಚಿಸಿಕೊಳ್ಳುವುದು ಈ ಅಧ್ಯಯನದ ಉದ್ದೇಶವಾಗಿದೆ. ಅಲ್ಲದೆ ಸ್ವಂತಿಕೆ ಮತ್ತು ಆಧುನಿಕ ಮನೋಧರ್ಮ, ಸ್ವಂತಿಕೆ ಮತ್ತು ಲಿಂಗರಾಜಕಾರಣದ ಸಂಬಂಧಗಳು, ಸ್ತ್ರೀ ಸ್ವಾತಂತ್ರ್ಯತೆ ಕಾಳಜಿಯೊಂದಿಗೆ ಪುರುಷ ಪ್ರಧಾನ ವ್ಯವಸ್ಥೆಯ ಕಪಿಮುಷ್ಠಿಯಿಂದ ಬಿಡಿಸಿಕೊಳ್ಳುವ ಪ್ರಯತ್ನ ಮಾನಸಿಕ ತೊಳಲಾಟ, ಅಸಹಾಯಕತೆಯ ವಸ್ತುಸ್ಥಿತಿಯನ್ನು ಈ ಅಧ್ಯಯನ ಪರಿಶೀಲಿಸುತ್ತದೆ. ಇಲ್ಲಿ ವೈದೇಹಿಯವರು ಚಿತ್ರಿಸಿರುವ ಸ್ತ್ರೀ ಪಾತ್ರಗಳು ಮಾನಸಿಕ ದುರ್ಬಲತೆ, ದ್ವಂದ್ವತೆ, ಸಿನಿಕತನ, ಅಂತರ್ಮುಖತೆಗೆ ಒಳಗಾಗದೆ ತಮ್ಮ ಅಸ್ತಿತ್ವವನ್ನು ಗುರುತಿಸಿಕೊಂಡು ಹೇಗೆ ಸ್ವತಂತ್ರ್ಯವಾಗಿ ಬದುಕಲು ಇಚ್ಛಿಸುತ್ತವೆ. ಇದಕ್ಕೆ ಹಿನ್ನೆಲೆಯಾಗಿ ಮನಃಶಾಸ್ತ್ರ ಮತ್ತು

ಅಸ್ತಿತ್ವವಾದಕ್ಕೆ ಸಂಬಂಧಿಸಿದಂತಹ ಚಿಂತನೆಗಳನ್ನು ಅವರ ಕತೆಗಳಲ್ಲಿ ಗುರುತಿಸುವುದು ಇಲ್ಲಿಯ ವೈಶಿಷ್ಟ್ಯವಾಗಿವೆ. ಇಂದು ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಹಾಗೂ ಉತ್ಪಾದನೆಗಳ ನೆಲೆಯಲ್ಲಿ ಮಹಿಳೆ ಅನೇಕ ಸೌಲಭ್ಯಗಳನ್ನು ಪಡೆಯುತ್ತಿರುವುದರಿಂದ ಸ್ತ್ರೀ ಸ್ವಂತಿಕೆ, ಸಮಾನತೆ, ಅಸ್ತಿತ್ವದ ಕುರಿತು ಆಲೋಚಿಸುವುದು ಹೆಚ್ಚು ಪ್ರಸ್ತುತವೆಂಬುವನ್ನು ಈ ಅಧ್ಯಯನ ಪರಿಶೀಲಿಸಲು ಯತ್ನಿಸುತ್ತದೆ.

ಪುರುಷ ಪ್ರಧಾನ ವ್ಯವಸ್ಥೆಯು ಸ್ತ್ರೀಗೆ ಸೃಷ್ಟಿಸಿ ಕೊಟ್ಟ ಮೌಲ್ಯಗಳಲ್ಲಿ ತಾಯ್ತನವೂ ಒಂದು. ಇದನ್ನು ಅತಿಯಾಗಿ ವೈಭವೀಕರಿಸುತ್ತಾ, ಹೆಣ್ಣಿನ ಜೀವನದ ಅರ್ಥವಂತಿಕೆಯನ್ನು, ಸಾರ್ಥಕ್ಯವನ್ನು ಅವರ ಮಾತೃತ್ವದೊಂದಿಗೆ ಸಮೀಕರಿಸಲಾಗಿದೆ. ವಿವಾಹ ಸಂಸ್ಥೆಯು ಪ್ರತಿಪಾದಿಸುವ ವಿಧಿ–ನಿಷೇಧಗಳು ಸ್ತ್ರೀಯ ಲೈಂಗಿಕ ಬದುಕನ್ನು ನಿಯಂತ್ರಿಸುತ್ತಾ ಬಂದಿವೆ. ನಮ್ಮ ಕೆಲವು ಸ್ತ್ರೀವಾದಿ ಲೇಖಕಿಯರು ಈ ಬಗೆಯ ಮಿಥ್‌ನ್ನ ಒಡೆಯುವ ಪ್ರಯತ್ನ ಮಾಡಿದ್ದಾರೆ. ವೈದೇಹಿಯವರ **"ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು", "ಮರಗಿಡಬಳ್ಳಿ", "ಬೀಳು–ಬೇರು", "ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು"** ಮೊದಲಾದ ಕತೆಗಳಲ್ಲಿ ಊರಿನ ಹೆಂಗಸರ ವೇಷ ಭೂಷಣಗಳಲ್ಲಿ ಕುಟುಂಬಗಳಲ್ಲಿ ಉಂಟಾದ ಪಲ್ಲಟಗಳು, ಪ್ರತಿ ಸಂಸ್ಕೃತಿಯ ಸಂವೇದನೆಗಳು, ಚಾರಿತ್ರಿಕ ಪ್ರಜ್ಞೆ, ಅಭಿವ್ಯಕ್ತಿಯ ವೈವಿಧ್ಯತೆ ಮತ್ತು ಕಲಾತ್ಮಕ ಅಭಿವ್ಯಕ್ತಿಯನ್ನು ಕಾಣುತ್ತೇವೆ. **" ಗೂಡಿನೊಳಗೆ ಒಂದು ಹಕ್ಕಿ", 'ಆತ', 'ಅಕ್ಕು'** ಮೊದಲಾದ ಕತೆಗಳ ಮೂಲಕ ಕುಟುಂಬ ದಾಂಪತ್ಯಗಳ ಮಿತಿಗಳ ಬಗ್ಗೆ ಅನೇಕ ಮೂಲಭೂತ ಪ್ರಶ್ನೆಗಳನ್ನು ಎತ್ತುವುದರ ಮೂಲಕ ಸ್ತ್ರೀ ವಿಶಿಷ್ಟ ಸಂವೇದನೆಗಳನ್ನು ಈ ಪ್ರಬಂಧದಲ್ಲಿ ಚರ್ಚಿಸಲಾಗಿದೆ.

ವೈದೇಹಿಯವರ ಕತೆಗಳ ಮೂಲಕ ಸಮಕಾಲೀನ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ವತಂತ್ರ್ಯದ ಬಿಕ್ಕಟ್ಟು, ಕುಟುಂಬ, ಧಾರ್ಮಿಕ, ರಾಜಕೀಯ, ನ್ಯಾಯಿಕ ಹಾಗೂ ಸೃಜನಶೀಲತೆ ವಿಷಯಗಳಲ್ಲಿ ಲಿಂಗರಾಜಕಾರಣ ಸೃಷ್ಟಿಸುವ ವೈರುಧ್ಯಗಳನ್ನು ಈ ಪ್ರಬಂಧದಲ್ಲಿ ವಿಶ್ಲೇಷಿಸಲಾಗಿದೆ. ಹೆಣ್ಣು–ಹೆಣ್ಣುಗಳ ನಡುವಿನ ಸಂಘರ್ಷ ಸ್ತ್ರೀ ಸಬಲೀಕರಣ, ಅಸ್ತಿತ್ವವಾದ, ಹೊಸ ನೈತಿಕ ಪ್ರಶ್ನೆ ಹಾಗೂ ಹೊಸ ಚಹರೆಯ ಪ್ರಶ್ನೆಗಳನ್ನು ಇಲ್ಲಿ ಅರಿಯಲೆತ್ನಿಸಲಾಗಿದೆ. ಹೆಣ್ಣಿನ ಸ್ವಗತ, ಒಳತೋಟಿ, ಒಂಟಿತನ, ಭಾವನಾತ್ಮಕ ಸಂಘರ್ಷ, ಪರಕೀಯತೆ, ಲೈಂಗಿಕ ಸಂಬಂಧಗಳ ತೊಡಕುಗಳು, ಲಿಂಗರಾಜಕಾರಣ ಇವುಗಳ ಬಗ್ಗೆ ಲೇಖಕಿ ಎತ್ತುವ ಪ್ರಶ್ನೆಗಳನ್ನು ಸಮಕಾಲೀನ ನೆಲೆಯಲ್ಲಿ ಗ್ರಹಿಸುವ ಪ್ರಯತ್ನ ಮುಂದಿನ ಅಧ್ಯಾಯಗಳಲ್ಲಿ ಮಾಡಲಾಗಿದೆ.

ಒಟ್ಟಾರೆಯಾಗಿ, ಚಾರಿತ್ರಿಕ ಬೆಳವಣಿಗೆಯ ಮೂಲಕ ಅಸ್ತಿತ್ವದಲ್ಲಿರುವ ಲಿಂಗರಾಜಕಾರಣ, ಲೈಂಗಿಕ ರಾಜಕಾರಣವ ನೆಲೆಗಳನ್ನು ಬದಲಾಯಿಸುವ ಆಶಯಗಳನ್ನು ವೈದೇಹಿಯವರ ಕಥೆಗಳಲ್ಲಿ ಗುರುತಿಸಬಹುದಾಗಿದೆ. ಸ್ತ್ರೀ ನೆಲೆಯ ಅಭಿವ್ಯಕ್ತಿಯ ತಳಹದಿಯಾಗಿರುವ ಎಲ್ಲಾ ವಿಧದ ಯಾಜಮಾನ್ಯಗಳ ನಿರಾಕರಣೆ ಮತ್ತು ಸ್ವಂತಿಕೆಯ ಸ್ಥಾಪನೆಯಂತಹ ಸಮಕಾಲೀನ ವಿಶಿಷ್ಟಾಂಶಗಳನ್ನು ಇವರ ಕಥೆಗಳಲ್ಲಿ ಕಾಣಬಹುದಾಗಿದೆ. ಈ ಮೂಲಕ ವೈದೇಹಿಯವರ ಕತೆಗಳಲ್ಲಿ ಸ್ತ್ರೀ, ಸ್ತ್ರೀತ್ವ, ಸ್ತ್ರೀರೂಪಿ ಸಂರಚನೆಯ ವಿವಿಧ ಮಾದರಿಗಳನ್ನು, ಸ್ವತಂತ್ರ್ಯಕ್ಕಾಗಿ ನಡೆಸುವ ಹೋರಾಟಗಳನ್ನು, ಅವುಗಳ ನಡುವಿನ ಬಿಕ್ಕಟ್ಟುಗಳನ್ನು ಚರ್ಚಿಸಲು ಈ ಅಧ್ಯಯನ ಪ್ರಯತ್ನಿಸುತ್ತದೆ.

ಅಡಿಟಿಪ್ಪಣಿ:-

೧. ೧೯೯೮ ಸಾಹಿತ್ಯ ವಿಮರ್ಶೆ, ಸಂ.ಡಾ.ಜಿ.ಎಂ.ಹೆಗಡೆ, ಕರ್ನಾಟಕ ಸಾಹಿತ್ಯ ಅಕಾಡಮಿ,ಬೆಂಗಳೂರು, ೧೯೯೯, ಪುಟ-೧೪೨

೨. ಅದೇ, ಪುಟ-೧೬೧

೩. ಅದೇ, ಪುಟ-೧೭೧

೪. ಅದೇ, ಪುಟ-೧೭೧

೫. ವಿಜಯ ಕರ್ನಾಟಕ ದಿನಪತ್ರಿಕೆ, ದಿನಾಂಕ ೧೦-೩-೨೦೦೩

೬. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಸಂ.ಎಚ್.ಎಸ್. ಶ್ರೀಮತಿ ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬, ಪುಟ-೪೦೨

೭. ಅಲೆಗಳಲ್ಲಿ ಅಂತರಂಗ, ವೈದೇಹಿಯವರ ಸಮಗ್ರ ಕತೆಗಳ ಸಂಕಲನ, ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ) ಕರ್ನಾಟಕ. ೨೦೦೬, ಪುಟ-೪೨೯

೮. ಅದೇ, ಪುಟ-೫೮೫

೯. ೧೯೯೮ ಸಾಹಿತ್ಯ ವಿಮರ್ಶೆ, ಸಂ.ಡಾ.ಜಿ.ಎಂ.ಹೆಗಡೆ, ಕರ್ನಾಟಕ ಸಾಹಿತ್ಯ ಅಕಾಡಮಿ,ಬೆಂಗಳೂರು, ಪುಟ-೧೬೧

************

# ಅಧ್ಯಯ - ೨

## ವೈದೇಹಿಯವರ ಕತೆಗಳಲ್ಲಿ ಸ್ತ್ರೀಸ್ವಾತಂತ್ರ್ಯ ಮತ್ತು ಸಮಾನತೆಯ ಆಶಯಗಳು

ವೈದೇಹಿಯವರ ಕತೆಗಳಲ್ಲಿ ಸ್ತ್ರೀಪರ ಸಂವೇದನೆ ಹಾಗೂ ಸಾಮಾಜಿಕ ನಿಲುವುಗಳ ಬಗೆಗೆ ಮುಕ್ತ ಆಲೋಚನೆಗಳಿದ್ದು ವಸ್ತು ಮತ್ತು ಅಭಿವ್ಯಕ್ತಿಯಲ್ಲಿ ವೈವಿಧ್ಯತೆಯಿದೆ. ಗಂಡು-ಹೆಣ್ಣಿನ ಸಂಬಂಧ ಕುರಿತು ವಿವೇಚಿಸುವುದು, ಸಾಮಾಜಿಕ ಅಸಮಾನತೆಯನ್ನು ಕುರಿತು ಪ್ರಶ್ನಿಸುವುದು, ಸ್ತ್ರೀ ಶಿಕ್ಷಣದ ಅಗತ್ಯದ ಅರಿವು ಮೂಡಿಸುವುದು, ವ್ಯಕ್ತಿ ಸ್ವಾತಂತ್ರ್ಯತೆಯನ್ನು ಎತ್ತಿ ಹಿಡಿಯುವುದು ಇವೇ ಮೊದಲಾದ ವೈಯಕ್ತಿಕ ಮತ್ತು ಸಾಮಾಜಿಕ ಕಾಳಜಿಗಳ ಅಭಿವ್ಯಕ್ತಿ ಇವರ ಕತೆಗಳ ವೈಶಿಷ್ಟ್ಯವಾಗಿದೆ.

ಸ್ತ್ರೀಯ ಸ್ಥಾನಮಾನ, ಮಾನಾಪಮಾನಗಳ ಪ್ರಶ್ನೆ, ನೋವು-ನಲಿವುಗಳು, ವಿವಾಹ ಪೂರ್ವ-ವಿವಾಹ ನಂತರದ ಲೈಂಗಿಕ ಸಂಬಂಧಗಳಿಂದ ಉಂಟಾದ ಸಮಸ್ಯೆಗಳನ್ನು ಕುರಿತ ಅನೇಕ ಮೂಲಭೂತ ಪ್ರಶ್ನೆಗಳನ್ನು ವೈದೇಹಿಯವರು ತಮ್ಮ ಕತೆಗಳಲ್ಲಿ ಎತ್ತಿದ್ದಾರೆ. ಸ್ತ್ರೀ ಜಗತ್ತಿನ ಸಮಸ್ಯೆಗಳನ್ನು ವಸ್ತುನಿಷ್ಠವಾಗಿ ಮತ್ತು ಅನುಭಾವಾತ್ಮಕವಾಗಿ ಸರಳವಾದ ಶೈಲಿಯಲ್ಲಿ ಆತ್ಮೀಯವಾಗಿ ಚಿತ್ರಿಸಿದ್ದಾರೆ.

ಮನಃಶಾಸ್ತ್ರದ ನೆಲೆಯಲ್ಲಿ, ವೈಚಾರಿಕ ನೆಲೆಯಲ್ಲಿ, ಸ್ತ್ರೀ-ಕೇಂದ್ರಿತ ಪಾತ್ರಗಳನ್ನು ವ್ಯಾಖ್ಯಾನಿಸಿದ್ದಾರೆ. ಸ್ತ್ರೀ -ಸ್ವಾತಂತ್ರ್ಯತೆ, ಆರ್ಥಿಕ ಸಮಾನತೆಯಂತಹ ಆಶಯಗಳನ್ನು, ಹೆಣ್ಣು-ಗಂಡಿನ ಸಂಬಂಧಗಳನ್ನು ಹಾಗೂ ಸ್ತ್ರೀ ಸಮಸ್ಯೆಗಳನ್ನು ಮಾನವೀಯ ನೆಲೆಯಲ್ಲಿ ಪರಿಶೋಧಿಸುವ ಪ್ರಯತ್ನ ಮಾಡಿದ್ದಾರೆ. ಇವರು ಪುರುಷ ಪ್ರಧಾನ ವ್ಯವಸ್ಥೆಯ ರೀತಿ-ನೀತಿಗಳನ್ನು ಸೈದ್ಧಾಂತಿಕವಾಗಿ ಆಲೋಚಿಸಿದ್ದಾರೆ. ಮಹಿಳಾ ಶೋಷಣೆಯ ಭಿನ್ನ ನೆಲೆಗಳನ್ನು ತಮ್ಮ ಕತೆಗಳಲ್ಲಿ ಬಿಚ್ಚಿಟ್ಟಿದ್ದಾರೆ.

ಸ್ತ್ರೀ ಸ್ವಾತಂತ್ರ್ಯ ಹಾಗೂ ಸಮಾನತೆಯ ಆಶಯಗಳ ಬಗೆಗೆ ಗಾಂಧೀಜಿಯವರ ಅಭಿಪ್ರಾಯವನ್ನು ತಿಪ್ಪೇರುದ್ರಸ್ವಾಮಿಯವರು ಹೀಗೆ ಸಂಗ್ರಹಿಸಿ ಹೇಳಿದ್ದಾರೆ :

"ಹೆಂಗಸು ಅಹಿಂಸೆಯ ಅವತಾರ ಎಂಬುದನ್ನು ನಾನು ಪತ್ರಿಕೆಯ ಕಾಲಮುಗಳಲ್ಲಿ ಶ್ರುತಪಡಿಸಿದ್ದೇನೆ. ಅಹಿಂಸೆ ಅಂದರೆ ಅನಂತವಾದ ಪ್ರೇಮ. ಅನಂತ ಪ್ರೇಮವೆಂದರೆ ನಿಸ್ಸೀಮವಾದ ಸಹನಾ ಸಾಮರ್ಥ್ಯ. ಮಾನವ ಜನನಿಯಾದ ಸ್ತ್ರೀ ಹೊರತು ಮತ್ತಾರು ಇಷ್ಟೊಂದು ಅಧಿಕ ಪ್ರಮಾಣದಲ್ಲಿ ಈ ಗುಣವನ್ನು ಯಾರು ತೋರಬಲ್ಲರು? ತಾವು ಅಬಲಾ ವರ್ಗಕ್ಕೆ ಸೇರಿದವರೆಂಬುದನ್ನು ಹೆಂಗಸರು ಮರೆಯುವುದಾದರೆ, ಯುದ್ಧ ವಿರುದ್ಧವಾಗಿ ಅವರು ಗಂಡಸರಿಗಿಂತ ಎಷ್ಟೋ ಹೆಚ್ಚಾಗಿ ಕೆಲಸ ಮಾಡಬಲ್ಲರು. ಹೀಗೆ ಸ್ತ್ರೀ ಮತ್ತು ಪುರುಷರನ್ನು ಸಮಾನರೆಂದು ಭಾವಿಸುವ ಗಾಂಧಿವಾದ ಸಾಮಾಜಿಕ ವ್ಯವಹಾರಗಳಲ್ಲಿ ಹಾಗೂ ಕುಟುಂಬದಲ್ಲೂ ಇಬ್ಬರ ಸಹಭಾಗಿತ್ವ ಅನಿವಾರ್ಯವೆಂಬುದನ್ನು ಹೇಳುತ್ತದೆ."[೧]

"ಸ್ತ್ರೀಯರು ಪುರುಷರ ದಾಸ್ಯವನ್ನು ತೊರೆಯುವ ಮೂಲಕವೇ ಅವರ ಏಳಿಗೆಗಾಗಿ ವಿಧಿವಿಧಾನಗಳನ್ನು ರೂಪಿಸಬಹುದು. ಅಂದರೆ, ಸ್ತ್ರೀಯರು ಕುಟುಂಬದ ವ್ಯವಸ್ಥೆಯನ್ನು ಧಿಕ್ಕರಿಸಿ ಸಮಾನತೆಗಾಗಿ ಹೋರಾಡುವುದು

ಆರೋಗ್ಯಪೂರ್ಣವಲ್ಲ, ಬದಲಿಗೆ ಸ್ತ್ರೀಯರು ಕುಟುಂಬದ ಒಳಗಿದ್ದೇ ಸಮಾನತೆಯನ್ನು ಸಾಧಿಸುವ ಪ್ರಯತ್ನ ಮಾಡಬೇಕು. ವಿವಾಹವಾಗಲು ಆರ್ಥಿಕ ಸಾಮರ್ಥ್ಯವಿಲ್ಲದವರು ವಿವಾಹವಾಗಬಾರದು"[೨] ಎಂದು ಸ್ತ್ರೀ ಸ್ವಾತಂತ್ರ್ಯ ಹಾಗೂ ಸಮಾನತೆಯ ಬಗ್ಗೆ ಅಂಬೇಡ್ಕರ್ ಪ್ರತಿಪಾದಿಸುತ್ತಾರೆ.

ಸ್ತ್ರೀ ಸ್ವಾತಂತ್ರ್ಯದ ಬಗೆಗೆ ಸ್ತ್ರೀವಾದಿ ಚಿಂತಕರು ತಮ್ಮದೇ ಆದ ಕೆಲವು ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಕೆಲವು ಮುಖ್ಯ ಚಿಂತಕರ ಚಿಂತನೆಗಳು ಹೀಗಿವೆ.

"ಸ್ತ್ರೀವಾದದ ಒಳಗೆ ಸ್ವಾತಂತ್ರ್ಯವೆಂಬುದು ಪ್ರಪಂಚದ ಸ್ತ್ರೀಕರಣ ಇದು ಹೆಣ್ಣು ಮತ್ತು ಗಂಡಿನ ನಡುವಿನ ಮಾನಸಿಕ ಮತ್ತು ದೈಹಿಕ ಲಿಂಗ ತತ್ತ್ವದ ದ್ವಂದ್ವ ಮತ್ತು ಬೇರ್ಪಡಿಸುವಿಕೆಗಿಂತ ಭಿನ್ನವಾದುದ್ದು. ಮಾತ್ರವಲ್ಲ ಹೆಚ್ಚು ರಾಜಕೀಯ ಮತ್ತು ಸಾಂಸ್ಕೃತಿಕ ವೈರುಧ್ಯತೆಗಳ ಸೃಷ್ಟಿಯಾಗಿದೆ. ಸ್ತ್ರೀವಾದದಲ್ಲಿ ಸ್ವಾತಂತ್ರ್ಯದ ಮೂರನೇ ತತ್ವ ಹಾಗೂ ಪ್ರಕ್ರಿಯೆಯೊಂದಿದೆ. ಅದು ಲಿಂಗಭೇದವಿಲ್ಲದ ಹಾದಿ. ಪೌರುಷತ್ವ ಮತ್ತು ಸ್ತ್ರೀತ್ವ ಇವೆರೆಡು ಒಂದು ಇನ್ನೊಂದನ್ನು ಹೊರತಾಗಿಸುವ, ಅಭಿನ್ನವಾಗಿ ವಿವರಿಸಲಾದ ತತ್ತ್ವಗಳು. ಲಿಂಗರಹಿತ ತತ್ತ್ವದ ಒಳಗೆ ಸ್ತ್ರೀತ್ವವು ಸ್ತ್ರೀಯರಲ್ಲಿ ಮಾತ್ರ ಇರುವುದಲ್ಲ. ಅದು ಪ್ರಕೃತಿಯಲ್ಲಿ ಪುರುಷ ಮತ್ತು ಸ್ತ್ರೀಯರಲ್ಲಿ ಇರುವ ಚಟುವಟಿಕೆ ಮತ್ತು ಕ್ರಿಯಾಶೀಲತೆಯ ತತ್ತ್ವ. ಅದು ಸೃಷ್ಟಿಸುವ ನವ ಸಂಪೂರ್ಣತೆಯು ಲಿಂಗತ್ವವನ್ನು ದಾಟಿ ನಿಲ್ಲಬಲ್ಲುದು ಎಂಬುದು"[೩] ಎಂದು ಕವಿತಾ ರೈಯವರು ಅಭಿಪ್ರಾಯ ಪಡುತ್ತಾರೆ.

ಮಾನವ ಜನಾಂಗ ಕುರಿತ ಚರ್ಚೆಯಲ್ಲಿ, ಗಂಡಸು ಹೆಂಗಸನ್ನು ಬೇರೆ ಇರಿಸಿ ವ್ಯಾಖ್ಯಾನ ಮಾಡುವುದಿಲ್ಲ. ತನ್ನನ್ನು ಕೇಂದ್ರವಾಗಿರಿಸಿಕೊಂಡು ಮಾತ್ರ ವ್ಯಾಖ್ಯಾನಿಸುತ್ತಾನೆ. ಹೆಣ್ಣನ್ನು ಸ್ವತಂತ್ರ್ಯಜೀವಿ ಎಂದು ಪರಿಗಣಿಸುವುದಿಲ್ಲ. **' ಹೆಂಗಸು ಅವಲಂಬಿತ ಜೀವಿ.....'** ಎಂದೇ ಮಿಷೆಲ್ ಹೇಳುತ್ತಾನೆ. ಇದಕ್ಕೆ ಪ್ರತಿಯಾಗಿ, ಸ್ತ್ರೀ ಸ್ವಾತಂತ್ರ್ಯವೆಂದರೇನು ಎಂಬುದಕ್ಕೆ ಚಿತ್ರಾ ಘೋಷಗಳ ಅಭಿಪ್ರಾಯ ಹೀಗಿದೆ. " ಅಸಹಜವಾದ ಮತ್ತು ನಿರರ್ಥಕವಾದ ಕಟ್ಟಳೆಗಳನ್ನು ತೆಗೆದು ಹಾಕಿ ಪ್ರತಿಯೊಬ್ಬರು ಸಮಾಜವು ನೀಡುವ ಎಲ್ಲ ಸದವಕಾಶಗಳನ್ನು ಸರಿಯಾಗಿ ಯಾವ ನಿರ್ಬಂದವಿಲ್ಲದೆ ತಮ್ಮ ವ್ಯಕ್ತಿತ್ವದ ಬೆಳವಣಿಗೆಗೆ ಮತ್ತು ಅಭ್ಯುದಯಕ್ಕೆ ಉಪಯೋಗಿಸಿಕೊಳ್ಳುವುದು. "[೪]

ಪ್ರಸಿದ್ಧ ಸ್ತ್ರೀವಾದಿ ಚಿಂತಕಿ ಸಿಮೋನ್ ದ ಬುವಾ ಸ್ತ್ರೀ ಸ್ವಾತಂತ್ರ್ಯದ ಬಗ್ಗೆ ವ್ಯಕ್ತಪಡಿಸಿದ ನಿಲುವುಗಳೇನೆಂದರೆ, "ಎಂದಿನವರೆಗೆ ಪುರುಷ ನಿರ್ಮಿತ ಮಾನಸಿಕ ವೈಚಾರಿಕ ಚೌಕಟ್ಟುಗಳಲ್ಲಿಯೇ ಸ್ತ್ರೀ ಬದುಕಬೇಕಾಗುತ್ತದೋ ಅಲ್ಲಿಯವರೆಗೆ ನಿಜವಾದ ಅರ್ಥದಲ್ಲಿ ಸ್ತ್ರೀ ಸ್ವತಂತ್ರ್ಯಳಾಗುವುದಿಲ್ಲ. ಪ್ರತಿಯೊಬ್ಬ ಸ್ತ್ರೀಯ ಅಸ್ತಿತ್ವವು ಅರ್ಥಪೂರ್ಣವಾಗುವುದು ತನ್ನ ಮಿತಿಗಳನ್ನು ಮೀರಿ ಹೊರಬರುವ, ಸ್ವತಂತ್ರ್ಯವಾಗಿ ಆಯ್ಕೆ ಮಾಡಿಕೊಂಡ ಯೋಜನೆಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುವ ಅದಮ್ಯ ಬಯಕೆಯಲ್ಲಿ ಮಾತ್ರ" [೫] ಎಂದಿದ್ದಾರೆ.

" ಮಹಿಳೆಗೆ ಬೇಕಾಗುವುದು ಸ್ವೇಚ್ಛೆಯಲ್ಲ, ಆಳುವ ಅಧಿಕಾರವಲ್ಲ, ಆಕೆಗೆ ಅವಶ್ಯವಿರುವುದು ಸಹಜವಾಗಿ ಬೆಳೆಯುವ ಅವಕಾಶ, ಸ್ವಂತದ ಬುದ್ಧಿಯನ್ನು ಉಪಯೋಗಿಸುವ ಅವಕಾಶ, ಒತ್ತಡ ದಬ್ಬಾಳಿಕೆಗಳಿಂದ ಮುಕ್ತವಾದ ಬದುಕನ್ನು ಹೊಂದುವ ಅವಕಾಶ"[೬] ಹೀಗೆಂದು ಅಮೇರಿಕಾದ ಪ್ರಖ್ಯಾತ ಮಹಿಳಾ ವಿಮೋಚನಾವಾದಿ ಮಾರ್ಗರೇಟ್ ಫೂಲರ್ ವ್ಯಾಖ್ಯಾನಿಸುತ್ತಾರೆ.

ಕನ್ನಡದ ಪ್ರಮುಖ ಚಿಂತಕರಲ್ಲಿ ಒಬ್ಬರಾದ ಸಿ.ಎನ್. ರಾಮಚಂದ್ರನ್ ರವರು ಹೇಳುವಂತೆ, "ಕೌಟುಂಬಿಕ ಸಂಬಂಧಗಳಾಗಲೀ, ಸ್ತ್ರೀ ವಿಶೇಷ ಎಂದು ಗುರುತಿಸುವ ಇತರ ಅನುಭವವಾಗಲೀ ಅನುಭವದ ಸಾಂದ್ರತೆ ಮತ್ತು ತೀವ್ರತೆಯೊಂದಿಗೆ ಪ್ರಕಟವಾಗುವಾಗ ಪುರುಷಲೋಕದ ಮತ್ಯಾವುದೇ ಅನುಭವ ವಿಶೇಷಕ್ಕಿಂತ ಕಡಿಮೆಯಾಗಬೇಕಾದ್ದಿಲ್ಲ."[2] ಸ್ತ್ರೀವಾದ, ಸ್ತ್ರೀಸಂವೇದನೆಯನ್ನು ಕುರಿತ ಈ ಚಿಂತಕರ ನಿಲುವುಗಳನ್ನು ಹಿನ್ನೆಲೆಯಾಗಿರಿಸಿಕೊಂಡು ವೈದೇಹಿಯವರ ಕತೆಗಳನ್ನು ಈ ಅಧ್ಯಾಯದಲ್ಲಿ ಪರಿಶೀಲಿಸಬಹುದಾಗಿದೆ.

ಬದುಕನ್ನು ಕುರಿತ ಹೆಣ್ಣಿನ ಅದಮ್ಯ ಪ್ರೀತಿಯೇ ಸ್ತ್ರೀವಾದದ ಮೂಲವಾಗಿ ವೈದೇಹಿಯವರ ಕತೆಗಳಲ್ಲಿ ಕಾಣಬಹುದಾಗಿದೆ. ಇವರ ಕತೆಗಳ ಮೂಲವಿನ್ಯಾಸವೆಂದರೆ ಸ್ತ್ರೀ ಚೈತನ್ಯದ ವಿವಿಧ ಮುಖಗಳ ಅನಾವರಣ. ಬದುಕಿನ ಬಿಕ್ಕಟ್ಟಿನ, ನಿರ್ಣಾಯಕ ಗಳಿಗೆಗಳಲ್ಲಿ ಹೆಣ್ಣು ಕುಗ್ಗದೇ, ಸೋಲದೇ, ಬದುಕಿಗೆ ಬೆನ್ನು ತಿರುಗಿಸದೇ ನಡೆಸುವ ನಿರಂತರ ಹೋರಾಟವನ್ನು ವೈದೇಹಿ ತಮ್ಮ ಕತೆಗಳಲ್ಲಿ ಚಿತ್ರಿಸುತ್ತಾ ಹೋಗುತ್ತಾರೆ. ಅಧೀನ ಬದುಕಿನೊಳಗಿನ ಸುಖದ ನೆಲೆಗಳನ್ನು ಹುಡುಕುವುದರಲ್ಲಿಯೂ ಅವರಿಗೆ ಆಸಕ್ತಿಯಿದೆ.

ವೈದೇಹಿಯವರಿಗೆ ಸ್ತ್ರೀ ಸಮಾನತೆಯನ್ನು ಕುರಿತ ದೃಷ್ಟಿಕೋನದಲ್ಲಿ ಹಾಗೂ ಹೋರಾಟದಲ್ಲಿ ಹೆಣ್ಣು ಇಂದಲ್ಲ ನಾಳೆ ಗೆಲ್ಲಬಹುದು ಎಂಬ ವಿಶ್ವಾಸವಿದೆ. ಆದರೆ ಅಂತಹ ಗೆಲುವಿನ ಬಗ್ಗೆ ವೈದೇಹಿಯವರಿಗೆ ಅನುಮಾನಗಳೂ ಇದ್ದೇ ಇವೆ. ಸಮಾನತೆ ಕುರಿತ ಈ ಬಗೆಯ ದ್ವಂದ್ವ, ವೈರುದ್ಯಗಳ ನಡುವೆಯೂ ಸಮಾನತೆಯ ಆಚೆಗಿನ ಅಮೃತ ಮುಹೂರ್ತಗಳು_ಹೆಣ್ಣಿನ ಬದುಕಿನಲ್ಲಿವೆ ಎನ್ನುವುದು ಅವರ ನಿಲುವಾಗಿರುವಂತೆ ತೋರುತ್ತದೆ. ಹೀಗೆ ಹೇಳುವಾಗ ಅವರು ವಾಸ್ತವಕ್ಕೆ ಕುರುಡಾಗಿದ್ದಾರೆ ಎಂದಲ್ಲ. ಸ್ತ್ರೀಯರ ಆರ್ಥಿಕ ಸ್ವಾತಂತ್ರ್ಯ ಹಾಗೂ ಆಯ್ಕೆಯ ಬದುಕಿನ ಅವಕಾಶ ಎಲ್ಲವು ಅವರ ಕತೆಗಳ ಒತ್ತಾಸೆಗಳಾಗಿವೆ.

ತನಗೆ ಅನಿಸಿದ್ದನ್ನು ಹೇಳುವ, ಮಾಡುವ, ಬದುಕುವ ದಿಟ್ಟ ಹೆಣ್ತನವನ್ನು **"ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು"** ಎಂಬ ಕತೆಯಲ್ಲಿ ಗುರುತಿಸಬಹುದಾಗಿದೆ. ಇಲ್ಲಿ ಪುಟ್ಟಮ್ಮತ್ತೆಯ ಮೊಮ್ಮಗಳಾದ ಕಮಲಾವತಿಯು ಆರ್ಥಿಕವಾಗಿ ಪ್ರಬಲವಾಗಲು ಹೋರಾಡುತ್ತಾಳೆ. ತನ್ನದೇ ಆದ ಆಸೆ ಕನಸುಗಳನ್ನು ನನಸು ಮಾಡಲು ಅನೇಕ ಪ್ರಯತ್ನಗಳನ್ನು ನಡೆಸುತ್ತಾಳೆ. ರಂಗಪ್ಪಯ್ಯನ ಮನೆಯಲ್ಲಿ ಹೆಣ್ಣು ನೋಡಲು ಬಂದಾಗ ಅವಳು ಹೋಗಿರುತ್ತಾಳೆ. ಅವರ ಮನೆಯವರು ಬೈಯ್ದಿದ್ದಕ್ಕೆ ಮನೆಗೆ ಬಂದವಳೇ ಬಾವಿಯಿಂದ ನೀರು ಎತ್ತಿ ಎತ್ತಿ ಸುರಿಯುವುದರ ಮೂಲಕ ತನಗಾದ ಅವಮಾನವನ್ನು ಈ ರೀತಿ ತೋರಿಸಿಕೊಳ್ಳುತ್ತಾಳೆ. ಇದೊಂದು ಬಗೆಯ ಮೌನ ಪ್ರತಿಭಟನೆಯಾಗಿದೆ.

**'ಭೂತ'** ಕತೆಯಲ್ಲಿ ಪಾರ್ವತಿಯು ಮನೆಯ ಒಳಗಿನ ಮತ್ತು ಹೊರಗಿನ ಕೆಲಸವನ್ನು ಸಮರ್ಥವಾಗಿ ನಿಭಾಯಿಸುವವಳು. ಮದುವೆಯಾದ ನಂತರ ತನ್ನ ಗಂಡನಿಗೆ ಮೊದಲೇ ಒಂದು ಮದುವೆಯಾಗಿದ್ದು ತಿಳಿದು ತನ್ನ ಮಗುವಿನೊಂದಿಗೆ ತಾಯಿಯ ಮನೆಗೆ ಬಂದು ಸ್ವತಂತ್ರ್ಯವಾಗಿ ಬದುಕಲು ತೊಡಗುತ್ತಾಳೆ. ಅವಳ ಗಂಡ ಬಂದು ಕರೆದಾಗ ನಿರಾಕರಿಸುತ್ತಾಳೆ. ಪಾರ್ವತಿಗೆ ಸ್ವತಂತ್ರ್ಯವಾಗಿ ಬದುಕುವ ಬಗ್ಗೆ ಇರುವ ದೃಢ ನಂಬಿಕೆ, ವಿಶ್ವಾಸ, ಛಲ, ಧೈರ್ಯ ಮೊದಲಾದ ಭಾವನೆಗಳು ಆಕೆಯು ತನ್ನ ಸ್ವಂತ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸುತ್ತಿರುವುದನ್ನು ಸೂಚಿಸುತ್ತವೆ. ಸ್ವತಂತ್ರ ಚಿಂತನೆ, ಕ್ರಿಯೆ ಹಾಗೂ ಭಾವನೆಗಳುಳ್ಳ ವ್ಯಕ್ತಿಯಾಗಿ ಪಾರ್ವತಿ ಈ ಕತೆಯಲ್ಲಿ ಬಿಂಬಿತವಾಗಿದ್ದಾಳೆ.

ವಿವಾಹ ಹೆಣ್ಣಿನ ಬದುಕಿನ ಮಹತ್ವದ ಹಂತ ಎಂದು ಸಮಾಜ ಗುರುತಿಸಿದೆ. ಈ ವಿಚಾರದಲ್ಲಿ ಆಯ್ಕೆಯ ಸ್ವಾತಂತ್ರ್ಯ ಇಲ್ಲದೆ ಹೆಣಗಾಡುವ ಸ್ತ್ರೀ ಪಾತ್ರಗಳನ್ನು ವೈದೇಹಿಯವರ ಕೆಲವು ಮುಖ್ಯ ಕತೆಗಳಲ್ಲಿ ಕಾಣಬಹುದಾಗಿದೆ. **'ಚಿಪ್ಪು', 'ಬೀಳು-ಬೇರು', 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ', 'ಅಮ್ಮಚ್ಚಿಯೆಂಬ ನೆನಪು', 'ಅಂತರಂಗದ ಪುಟಗಳು'** ಈ ಕತೆಗಳ ವಸ್ತು ವಿವಾಹದ ಬಿಕ್ಕಟ್ಟುಗಳನ್ನು ಕುರಿತದ್ದಾಗಿವೆ. ಇಲ್ಲಿ ವಿವಾಹದ ವಿಚಾರವಾಗಿ ಹೆಣ್ಣಿಗಿರುವ ಸ್ವಾತಂತ್ರ್ಯವೆಷ್ಟು? ಎಂಬ ಪ್ರಶ್ನೆ ಏಳುತ್ತದೆ. ತನ್ನ ಜೀವನದ ಮುಖ್ಯ ತಿರುವಾದ ವಿವಾಹದಲ್ಲಿ ತನ್ನದಲ್ಲದ ನಿರ್ಧಾರಗಳನ್ನು ಒಪ್ಪಿ ಕೊನೆವರೆಗೂ ಹೆಣಗಾಡುವ ಹೆಣ್ಣಿನ ಚಿತ್ರಣವನ್ನು ಈ ಕತೆಗಳಲ್ಲಿ ಕಾಣಬಹುದಾಗಿದೆ.

**"ಚಿಪ್ಪು"** ಕತೆಯ ಯಶೀಯ ಪಾತ್ರದ ಮೂಲಕ ಸ್ತ್ರೀ ಸ್ವಾತಂತ್ರ್ಯ ಹೇಗೆ ಕುಟುಂಬದವರಿಂದ ನಿಯಂತ್ರಿಸಲ್ಪಡುತ್ತದೆ ಎಂಬುದನ್ನು ವೈದೇಹಿಯವರು ಚಿತ್ರಿಸಿದ್ದಾರೆ. ಯಶೀಯನ್ನು ಹೊಗಳಿ ಅವಳನ್ನು ಒಳ್ಳೆಯವಳೆಂದು ಹೇಳಿಯೇ ವಿವಾಹದ ಬಗ್ಗೆಯಾಗಲಿ, ಆಕೆಯ ಬದುಕಿನ ಬಗ್ಗೆಯಾಗಲಿ ಯಾವುದೇ ನಿರ್ಧಾರವನ್ನು ತೆಗೆದುಕೊಳ್ಳದಂತೆ ನಿರ್ಲಿಪ್ತ ಸ್ಥಿತಿಯಲಿ ನಿಲ್ಲಿಸಿಬಿಡುತ್ತಾರೆ. ಆಕೆಯ ಅಭಿವ್ಯಕ್ತಿ ಸ್ವಾತಂತ್ರ್ಯವನ್ನೇ ಇಲ್ಲವಾಗಿಸುತ್ತಾರೆ. ಕೊನೆಗೆ ಅವಳನ್ನು ತನಗೆ ಸಂಸಾರ ಬೇಕೇ? ಬೇಡವೆ? ಏಕೆ? ಎಂಬ ದ್ವಂದ್ವದಲಿ ಮುಳುಗುವಂತಹ ಪರಿಸ್ಥಿತಿಗೆ ತಂದು, ಕುಟುಂಬದ ಯಜಮಾನಿಕೆ ಆಕೆಯನ್ನು ನಿಯಂತ್ರಿಬಿಡುತ್ತದೆ.

**"ಬೀಳು-ಬೇರು"** ಕತೆಯಲ್ಲಿ ಕಥಾನಾಯಕಿ **'ಇಂದಿ'** ತಮ್ಮನ್ನು ನೋಡಲು ಬಂದ ಗಂಡುಗಳ ಎದುರು ಪ್ರದರ್ಶನದ ಗೊಂಬೆ ಹಾಗೆ ನಿಲ್ಲುವುದು, ತನಗೆ ಅನಿಸಿದ್ದನ್ನು ಹೇಳಲಾಗದೆ ಚಡಪಡಿಸುವುದು, ಆಕೆಯ ಮೌನ ಇವೇ ಮೊದಲಾದ ಭಾವನೆಗಳ ತುಮುಲಗಳ ಅಭಿವ್ಯಕ್ತಿಯಿದೆ. ಬಂದವರ ಎದುರೆಲ್ಲ ಒಂದು ವಸ್ತುವಿನ ಹಾಗೆ, ಮೂಕ ಪ್ರಾಣಿಯ ಹಾಗೆ ಕುಳಿತುಕೊಳ್ಳುವುದು ಅವಳಿಗೆ ಇಷ್ಟವಿಲ್ಲದ ಕಾರ್ಯ. ಅದನ್ನು ಹೇಳಿ ಪ್ರತಿಭಟಿಸುವ ಸ್ವತಂತ್ರ್ಯವು ಅವಳಿಗಿಲ್ಲ. ಅಳುವೊಂದೇ ಅವಳ ಪ್ರತಿಕ್ರಿಯೆಯಾಗಿದೆ. ಮನೆಯಲ್ಲಿ ತನ್ನ ಅಸ್ತಿತ್ವವನ್ನು ಸ್ಥಾಪಿಸಲು ಪ್ರಯತ್ನವನ್ನು ಮಾಡದ ತಮ್ಮಣ್ಣನ ಹೆಂಡತಿಯು ಕೌಟುಂಬಿಕ ವಲಯದ ನಿಯಂತ್ರಣದಿಂದ ನಿಯಂತ್ರಿತವಾಗುವ ಹೆಣ್ಣಿನ ಪ್ರತೀಕವಾಗಿದ್ದಾಳೆ.

**'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ'** ಎಂಬ ಕತೆಯು ಒಂದು ಮದುವೆ ಮನೆಯ ಸಮಾರಂಭವನ್ನು ಚಿತ್ರಿಸುವುದರೊಂದಿಗೆ **'ಮದುವೆ'** ಯಲ್ಲಿ ಹೆಣ್ಣಿನ ಪಾತ್ರವೇನು? ಎಂಬುದನ್ನು ಓದುಗರ ಮುಂದಿಡುತ್ತದೆ. ಈ ಕತೆಯಲ್ಲಿ ಬರುವ ಹೆಬ್ಬಾಗಿಲಜ್ಜಿ ತನ್ನ ಮದುವೆ ನಡೆದುದ್ದನ್ನು, ಅದಕ್ಕಾಗಿ ತನ್ನ ಅಪ್ಪ ಒಳ್ಳೆಯ ಜಾತಕ ಹೊಂದಿರುವವನನ್ನು ಹುಡುಕಿ ಹಲವಾರು ಕಡೆ ವಿಚಾರಿಸಿ ಮದುವೆ ಮಾಡಿದ್ದನ್ನು ಹೇಳುತ್ತಾಳೆ. ಆದರೂ ತಾನು ಹದಿನಾಲ್ಕು ವರ್ಷಕ್ಕೆ ವಿಧವೆಯಾಗುತ್ತಾಳೆ. ಸಂಪ್ರದಾಯದ ಪ್ರಕಾರ ಮದುವೆ ಮಾಡುವುದರಿಂದಲೂ ಸಂಭವಿಸಬಹುದಾದ ಅನಾಹುತವನ್ನು ಈಕೆ ಅನುಭವಿಸುತ್ತಾಳೆ. ತನ್ನನ್ನು ಕೇಳದೆ ತಂದೆಯ ಇಷ್ಟದ ರೀತಿ ಮದುವೆ ಮಾಡಿದ್ದರ ಬಗ್ಗೆ ಎಲ್ಲೋ ಒಂದು ಮೂಲೆಯಲ್ಲಿ ತನಗೆ ನೋವಿದೆ ಎಂಬುದನ್ನು ಸೂಕ್ಷ್ಮವಾಗಿ ಪ್ರತಿಕ್ರಿಯಿಸುತ್ತಾಳೆ. ಆದರೂ ವಿಧವೆಯಾಗಿ ಸಂಪ್ರದಾಯದ ಕಟ್ಟಳೆಯಂತೆ " ಹಣೆಯ ಬೊಟ್ಟಿಲ್ಲದೆ, ಕರಿಮಣಿಯಿಲ್ಲದೆ, ಬೋಳುತಲೆಯ ಮೇಲೆ ಹಾಸಿದ ಕೆಂಪು ಸೆರಗು, ಯಾವ ಉಪಚಾರವಿಲ್ಲದೆ ಸುಕ್ಕುಗಟ್ಟಿ

ನಿವೃತ್ತರಾದ, ಮಂಟಪಕ್ಕೆ ಇನ್ನು ಆಜೀವ ಪರ್ಯಂತ ರಂಗೋಲಿ ಬರೆಯಬಾರದ, ಮಂಟಪದ ಬಳಿ ಸುಳಿಯಲೂ ಕೂಡದ, ಗಂಡಸರ ಕಣ್ಣಿಗೆ ಬೀಳದ ಜಾಗದಲ್ಲಿ ಕುಳಿತು ಮದುವೆಯನ್ನು ಕಾಣಬೇಕಾದ ಸ್ಥಿತಿಯಿಂದಾಗಿ ಬೇಸತ್ತಿರುವುದು"[8] ಸೂಚ್ಯವಾಗಿ ಕತೆಯಲ್ಲಿ ಅಭಿವ್ಯಕ್ತಗೊಂಡಿದೆ. ಇಲ್ಲಿ ಸಂಪ್ರದಾಯಸ್ಥ ಬ್ರಾಹ್ಮಣರ ಮನೆಗಳಲ್ಲಿ ಅನುಸರಿಸುವ ವಿಧಿ ವಿಧಾನಗಳಿಂದ ಹಲವು ಕಷ್ಟಗಳನ್ನು ಅನುಭವಿಸುವ ಹೆಣ್ಣುಗಳ ಚಿತ್ರಣವಿದೆ.

ಮದುವೆ ಮನೆಯಲ್ಲಿ ಗಂಡಸರ ವರ್ತನೆಯ ಬಗ್ಗೆ ವಿಶ್ಲೇಷಣೆ ಮಾಡುತ್ತಾ ಇರಬೇಕಾದರೆ ವಾಗತ್ತೆ ಈ ರೀತಿ ಹೇಳುತ್ತಾರೆ. "ಹೆಣ್ಣೇ ಏನೆಂತ ತಿಳಿದಿದ್ದೀ ಮುಂಚಿನ ಕಾಲದ ಗಂಡಸರೇ ಹೀಗೆ. ಹೆಂಗಸರನ್ನು ಎಲ್ಲಿ ಇಡಬೇಕೋ ಅಲ್ಲೇ ಇಟ್ಟಿದ್ದಕ್ಕೆ ಬಚಾವಾದರು. ಆಸ್ತಿ, ಮನೆ ಚೆನ್ನ ಬಣ್ಣ ಮಾಡಿದರು. ಈಗಿನವರಂತೆ ಹೆಂಡತಿ ಕೂತದ್ದೇ ಚಂದ, ನಿಂತದ್ದೇ ಚಂದ ಎಂದಿದ್ದರೊ ಗಂಡನಾದವ ಕವುಂಚಿಯೇ ಹೋಗುವುದಲ್ಲವೇ"[9] ಇಲ್ಲಿ ಸಂಪ್ರದಾಯವನ್ನು ಒಪ್ಪಿಕೊಂಡ ವಾಗತ್ತೆ ಪುರುಷರೂಪ ಸಮಾಜದ ಮೌಲ್ಯಗಳನ್ನು ಒಪ್ಪಿಕೊಂಡು ಹೆಣ್ಣಿನ ಸ್ಥಾನಮಾನವನ್ನು ನಿರ್ಧರಿಸುವುದನ್ನು ಕಾಣಬಹುದಾಗಿದೆ. ಹೆಣ್ಣನ್ನು ಕೇಳಿಯೇ ಗಂಡು ಎಲ್ಲ ಕೆಲಸವನ್ನು ಮಾಡಬಾರದು. ಅವನ ಬುದ್ಧಿಗೆ ತೋಚಿದ ರೀತಿ ವರ್ತಿಸಿ ಹೆಣ್ಣನ್ನು ನಿಯಂತ್ರಿಸಿದರೆ ಮಾತ್ರ ಬದುಕು ಸುಗಮವಾಗಿ ನಡೆಯುವುದು ಎಂಬ ಅಭಿಪ್ರಾಯವನ್ನು ವಾಗತ್ತೆ ವ್ಯಕ್ತಪಡಿಸುತ್ತಾಳೆ. ಬಾಲ್ಯದಿಂದಲೂ ತಮ್ಮ ಸಂತೋಷದ ಸಂಕೇತವಾದ, ಬದುಕನ್ನು ಸಹ್ಯಗೊಳಿಸುವ ಎಲ್ಲಾ ರೀತಿ ನೀತಿ ಅಲಂಕಾರಗಳನ್ನು ಬಿಟ್ಟು ಎಷ್ಟೇ ಚಿಕ್ಕ ವಯಸ್ಸಿನಲ್ಲಿ ವಿಧವೆಯಾದರೂ ಎಲ್ಲಾ ಕಷ್ಟಗಳನ್ನು ಅನುಭವಿಸುತ್ತ ತಮಗೆ ಇಷ್ಟವಿಲ್ಲದಿದ್ದರು ವೈರಾಗ್ಯದ ಜೀವನ ನಡೆಸುವ ಹೆಣ್ಣಿನ ಚಿತ್ರಣ ಮನೋಜ್ಞವಾಗಿದೆ. ಬೇಂದ್ರೆಯವರ **'ಪುಟ್ಟ ವಿಧವೆ'** ಕವನದ ನಾಯಕಿಯಂತೆ ಇಲ್ಲಿಯು ಎಳೆಯ ಪ್ರಾಯದ ವಿಧವೆ ಸಂಪ್ರದಾಯಕ್ಕೆ ಬಲಿಯಾಗಿ, ಕುರುಡು ಧರ್ಮದ ಸ್ಮಾರಕವಾಗಿ ನಿಂತಿರುವುದನ್ನು ಈ ಕತೆ ಧ್ವನಿಸುತ್ತದೆ.

ಇದೇ ಕತೆಯ ಮತ್ತೊಂದು ಮುಖ್ಯಪಾತ್ರವಾಗಿ ವಾರಿಜಳನ್ನು ನೋಡಬಹುದು. ಇವಳು ತನ್ನ ತಂದೆ ಹೇಳಿದ್ದನ್ನು ಚಾಚು ತಪ್ಪದೆ ಪಾಲಿಸುತ್ತಾಳೆ. ಆದ್ದರಿಂದಲೇ ಅಜ್ಜಿಯಿಂದ ಒಳ್ಳೆಯವಳೆಂಬ ಬಿರುದು ಪಡೆಯುತ್ತಾಳೆ. ವಾರಿಜಳ ಅಪ್ಪ ಮಗಳನ್ನು ಮದುವೆ ಮನೆಗೆ ಕರೆದುಕೊಂಡು ಬಂದಿರುವುದೇ ಯಾರಾದರೂ ನೋಡಿ ಒಪ್ಪಿದರೆ ಮದುವೆ ಮಾಡಿಬಿಡುವ ಎನ್ನುವ ಉದ್ದೇಶದಿಂದ. ಅವನ ಉದ್ದೇಶ ಈಡೇರಿದಂತೆ ಭೀಮರಾಯರು "ಜಾತಕ ಕಳುಹಿಸಿಕೊಡಿ ಮುಂದಿನ ಶ್ರಾವಣದಲ್ಲಿ ಮದುವೆ ಮಾಡುವ"[10] ಹುಡುಗಿ ತಮ್ಮ ಮನೆಗೆ ತಕ್ಕವಳೆಂದು ನಿರ್ಧರಿಸಿ ಹೇಳುತ್ತಾರೆ. ಆದಕ್ಕೆ ವಾರಿಜಳ ತಂದೆ ಗೆದ್ದೆನೆಂಬ ಸಂತೋಷದಿಂದ ಮಗಳನ್ನು ಕರೆದುಕೊಂಡು ಮದುವೆ ಮನೆಯಿಂದ ಹೊರ ಹೋಗುತ್ತಾನೆ. ವಾರಿಜ ತನ್ನ ಗೋಂಟು ಜಡೆಯನ್ನೇ ಮುಂದಕ್ಕೆಳೆದು ಆಧಾರವೆಂಬಂತೆ ಹಿಡಿದು ಅಪ್ಪನನ್ನು ಹಿಂಬಾಲಿಸುತ್ತಾಳೆ. ಇಲ್ಲಿ ಅವಳ ಅಭಿಪ್ರಾಯ ಮುಖ್ಯವಾಗಿರುವುದಿಲ್ಲ, ತನ್ನೊಳಗಿನ ಭಾವನೆಯನ್ನು ವ್ಯಕ್ತಪಡಿಸಲಾಗದ ವಾರಿಜ ಆಧಾರ ನೀಡಲು ಸಾಧ್ಯವಾಗದ ತನ್ನ ಜಡೆಯನ್ನೇ ಆಧಾರವೆಂದು ಹಿಡಿದು ನಡೆಯುತ್ತಾಳೆ. ಲತಾ ಎಂಬ ಹುಡುಗಿ ತನ್ನನ್ನು ತೆರೆದುಕೊಳ್ಳಲು ಪ್ರಯತ್ನಿಸಿದಕ್ಕೆ ಮದುವೆ ಮನೆಯಲ್ಲಿ ಕೆಟ್ಟ ಹುಡುಗಿ ಎನಿಸಿಕೊಳ್ಳುತ್ತಾಳೆ. ತಾನು ಯಾರಿಗೋ ಒಲಿದಿದ್ದರು ಅದನ್ನು ಹೇಳಿಕೊಳ್ಳಲಾಗದೆ, ಹೇಳದೆ ಇರಲು ಆಗದ ಬಿಕ್ಕಟ್ಟಿನ ಯಾತನೆಯನ್ನು ಅನುಭವಿಸುತ್ತಾಳೆ. ವಾರಿಜಳ ಈ ದ್ವಂದ್ವ ನಿಲುವಿಗೆ ಸಂಬಂಧಿಸಿದಂತೆ ಲತಾ ತನ್ನ ಅಭಿಪ್ರಾಯವನ್ನು ಈ ರೀತಿ ವ್ಯಕ್ತಪಡಿಸುತ್ತಾಳೆ." ಹುಡುಗ ಒಪ್ಪಿದ ಮೇಲೆ, ಹುಡುಗಿಗೂ ಒಪ್ಪಿಗೆಯೇ

ಎಂದು ವಿಚಾರಿಸಿ, ಆಕೆ ಒಪ್ಪಿದಳೆಂದಾದರೆ, ಸ್ಪಷ್ಟ ಮದುವೆ ಮಾಡುವುದು ಬಿಟ್ಟು, ಸ್ವಂತ ಅಸ್ತಿತ್ವವೇ ಇಲ್ಲದವರಂತೆ ಪರದಾಡುತ್ತಾರೆ.''[೧೧] ಎನ್ನುತ್ತಾಳೆ. ಈ ವಿಚಾರವನ್ನೆಲ್ಲ ದಾಖಲಿಸುವ ಸಮಾಜಶಾಸ್ತ್ರಜ್ಞೆಯ ಮನಸ್ಸಿನಲ್ಲಿ ಮೂಡುವ ಹಲವು ಪ್ರಶ್ನೆಗಳನ್ನೇ ಲೇಖಕಿ ಸ್ತ್ರೀ ಸ್ವತಂತ್ರ್ಯದ ಬಗ್ಗೆ ಎತ್ತುವ ಪ್ರಶ್ನೆಗಳಾಗಿರುವುದನ್ನು ಇಲ್ಲಿ ನೋಡಬಹುದಾಗಿದೆ. ಉದಾಹರಣೆಗೆ, ಮದುವೆ ಎಂದರೇನು? ಇದರಲ್ಲಿ ಹೆಣ್ಣು ಗಂಡಿನ ಪಾತ್ರವೇನು? ಭೀಮರಾಯರಿಗೆ ಮತ್ತು ವಾಸುದೇವರಾಯರ ಮಗನಿಗೆ ಜಾತಕದ ಸುದ್ದಿಯೇಕೆ?."[೧೨] ಇತ್ಯಾದಿ. ಹೀಗೆ ಹೆಣ್ಣುಮಕ್ಕಳ ವಿವಾಹದ ತೀರ್ಮಾನಗಳಿಗೆ ಸಾಂಪ್ರದಾಯಿಕ ಸಮಾಜವು ಸ್ಪಂದಿಸದ ಕಾರಣದಿಂದ ಅವಿವಾಹಿತರಾಗಿ ಉಳಿಯುವ, ಸೂಕ್ತವಾದ ಗಂಡಿನ ಬಗ್ಗೆ ಆಯ್ಕೆಯ ಸ್ವಾತಂತ್ರ್ಯವಿಲ್ಲದೆ ಅತೃಪ್ತಿ ಹೊಂದುವ, ವಿವಾಹದ ನಂತರದ ಕೌಟುಂಬಿಕ ಪರಿಸರದಲ್ಲಿ ಏರುಪೇರನ್ನು ಎದುರಿಸುವ ಹಲವಾರು ಸಮಸ್ಯೆಗಳನ್ನು ಇಲ್ಲಿಯ ಕತೆಗಳಲ್ಲಿನ ಹೆಣ್ಣುಗಳು ಎದುರಿಸುತ್ತವೆ. ಇದಕ್ಕೆ ಕಾರಣ ಸಮಾಜ ಹಾಗೂ ಅದರ ಪ್ರತಿಯೊಂದು ಅಂಗ ಸಂಸ್ಥೆಯು ಲಿಂಗತಾರತಮ್ಯವನ್ನು ಆಳವಾಗಿ ಸ್ವೀಕರಿಸಿ ಆಚರಿಸಿಕೊಂಡು ಬರುತ್ತಿರುವುದೇ ಆಗಿದೆ.

ಎರಿಕ್ ಎರಿಕ್‌ಸನ್ ಎಂಬ ಮನೋವಿಜ್ಞಾನಿ "ಹೆಣ್ಣು ಮಕ್ಕಳು ತಾವು ಮದುವೆಯಾಗುವುದು ಯಾರನ್ನು ಮತ್ತು ತಾವು ಯಾರಿಗಾಗಿ ಮನೆಯನ್ನು ನಡೆಸಬೇಕಾಗಿದೆ ಎಂಬುದು ತಿಳಿಯುವವರೆಗೂ ಹೆಣ್ಣಿನ ಅಸ್ತಿತ್ವವನ್ನು ವಿವಾಹವೆಂಬ ಸಂಸ್ಥೆಯ ಮೂಲಕ ಹೇಗೆ ನಿರಾಕರಿಸಲಾಗಿದೆ? ಹೆಣ್ಣಿನ ಸ್ವತಂತ್ರ್ಯವನ್ನು ಸಮಾಜ ಹೇಗೆ ಕಸಿದುಕೊಳ್ಳುತ್ತದೆ? ಯಾವುದನ್ನೆಲ್ಲ ಇಲ್ಲಿಯತನಕ ಹೆಣ್ಣಿನ ದೌರ್ಬಲ್ಯಗಳು, ನೇತ್ಯಾತ್ಮಕ ಗುಣಗಳು ಎಂದು ವ್ಯವಸ್ಥೆ ಸ್ಥಾಪಿಸುತ್ತಾ ಬಂದಿದೆಯೋ, ಅಥವಾ ಅವುಗಳೇ ಸ್ತ್ರೀಶಕ್ತಿಯ ವಿಶೇಷ ಗುಣಗಳು ಎಂದು ಪರಿಭಾವಿಸುವುದರ ಮೂಲಕ ಹೆಣ್ಣು ಪಡೆಯಬಹುದಾದ ಬಿಡುಗಡೆಯೋ"[೧೩] ಎಂಬಂತಹ ಹಲವು ಪ್ರಶ್ನೆಗಳನ್ನು ಎರಿಕ್‌ಸನ್ ಎತ್ತಿದ್ದಾನೆ. ಈ ಬಗೆಯ ಹಲವು ಪ್ರಶ್ನೆಗಳನ್ನು ಹಾಗೂ ಈ ಕುರಿತ ಹಲವು ದ್ವಂದ್ವ, ವೈರುಧ್ಯಗಳನ್ನು ವೈದೇಹಿಯವರ ಹಲವು ಕತೆಗಳಲ್ಲಿ ಕಾಣಬಹುದಾಗಿದೆ. ಹೆಣ್ಣಿನ ಚಾಂಚಲ್ಯ ಎನ್ನುವುದು ಪ್ರತಿರೋಧದ ರೂಪವಾಗಿ, ಹೆಣ್ಣಿನ್ನು ಕೇಂದ್ರವಲ್ಲ ಆಕೆ ಅಂಚಿನವಳು ಅನ್ನುವುದಾದರೆ ಆ ಅಂಚೇ ಕೇಂದ್ರವನ್ನು ಹಿಡಿದು ಅಲ್ಲಾಡಿಸಬಲ್ಲ ಸ್ವರೂಪದ್ದಾಗಿ ಇರುವಂತಹ ಕೆಲವು ಸ್ತ್ರೀ ಪಾತ್ರಗಳನ್ನು ತಮ್ಮ ಕತೆಗಳಲ್ಲಿ ಸೃಷ್ಟಿಸಿದ್ದಾರೆ.

ಹೆಣ್ಣಿನ ಮಿತಿ ಎಂದು ಹೇರಲಾದ ಜೈವಿಕ ಸತ್ಯವನ್ನೇ ಹೆಣ್ಣು ತನ್ನ ಶಕ್ತಿಯಾಗಿ ಮಾರ್ಪಡಿಸಿಕೊಳ್ಳಬಹುದಾದ ಸಾಧ್ಯತೆಯನ್ನು ವೈದೇಹಿಯವರ ಕತೆಗಳು ಪರಿಶೀಲಿಸುತ್ತವೆ. ಇದನ್ನು ಆಶಾದೇವಿಯವರು **"ಜೈವಿಕ ಸ್ತ್ರೀತ್ವದ ಸ್ವಾಯತ್ತತೆಯ ಪರಿಕಲ್ಪನೆ"** ಎಂದು ಕರೆದಿದ್ದಾರೆ. ವೈದೇಹಿಯವರ **"ಶಕುಂತಲೆಯೊಂದಿಗೆ ಕಳೆದ ಅಪರಾಹ್ನ"** ಎಂಬ ಕತೆಯ ಶಕುಂತಲೆ ತನಗಾದ ಅವಮಾನ, ದ್ರೋಹ, ಅನ್ಯಾಯ, ಭವಿಷ್ಯದ ಅನಿಶ್ಚಿತತೆ ಈ ಎಲ್ಲವನ್ನು ಗೆದ್ದು ಬಿಡುವುದು ಈ ಬಗೆಯ ಜೈವಿಕ ಸ್ತ್ರೀತ್ವದ ಸ್ವಾಯತ್ತತೆಯ ಕಲ್ಪನೆಗೆ ಒಂದು ನಿದರ್ಶನವಾಗಿದೆ."ತನ್ನ ಪಾಲಿಗೆ ದೊರೆತ ಪುರುಷನ ಅಂಶವನ್ನು ತನ್ನೊಳಗೆ ಧಾರಣೆ ಮಾಡಿ , ಅದಕ್ಕೆ ಸೂಕ್ತ ಪೋಷಣೆ ನೀಡಿ ಸಂತಾನವನ್ನು ಈ ಭೂಮಿಗೆ ತರುವ ಅವಳ ಅಂತಃ ಸಾಮರ್ಥ್ಯ ಮತ್ತು ಅನಂತರದಲ್ಲಿ ಆ ಸಂತಾನವನ್ನು ಸೂಕ್ತವಾಗಿ ಸಂಗೋಪ ಮಾಡುವಲ್ಲಿ ಅವಳು ತೋರುವ ದೈಹಿಕ, ಮಾನಸಿಕ , ನೈತಿಕ ಸಾಮರ್ಥ್ಯಗಳು ಅವಳಿಗೆ ಪ್ರೌಢ ಬದುಕಿನ ಸಾರ್ಥಕತೆಯ ಭಾವವನ್ನು ನೀಡುತ್ತವೆ. ಇದು ಅವಳಿಗೆ ಆಕರ್ಷಣೆಯ ವ್ಯಕ್ತಿತ್ವವನ್ನು ಒದಗಿಸುವ ಮುಖ್ಯ ಸಂಗತಿಯಾಗುತ್ತದೆ''[೧೪] ಎಂದು ಮನಃಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. "ಗುಲಾಬಿ

ಮೃದು ಪಾದಗಳು" ಕತೆಯ ನಾಯಕಿಗೆ ತಾಯ್ತನವಿಲ್ಲದ ಬದುಕು ಅಪೂರ್ಣ ಎನಿಸುವುದು ಈ ಕಾರಣಕ್ಕಾಗಿಯೇ. ಹೆಣ್ಣಾಗಿ ತನಗೆ ಸಿಗುವ ತಾಯ್ತನದ ಸುಖವನ್ನು ಅನುಭವಿಸಬೇಕು, ಅದರ ಸಾರ್ಥಕ ಭಾವನ್ನು ಪಡೆಯಬೇಕು. ಆಗ ಮಾತ್ರ ತನ್ನ ಬದುಕು ಈ ಲೋಕದಲ್ಲಿ ಸುಂದರವಾಗಿರುತ್ತದೆ ಎಂದು ಇಲ್ಲಿಯ ಕಥಾನಾಯಕಿ ಆಶಿಸುತ್ತಾಳೆ.

**ನಾಗರೀಕತೆಯ ಕ್ರೌರ್ಯ**

ಭಾರತದ ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯನಂತರದ ಸಂದರ್ಭದಲ್ಲಿ ಕೌಟುಂಬಿಕ ವ್ಯಾಪ್ತಿಯಲ್ಲಿ ಸ್ತ್ರೀಯರು ಅಪಾರವಾದ ಹಿಂಸೆಗೆ ಒಳಗಾಗಿದ್ದಾರೆ. ಯಾವುದೇ ಬದಲಾವಣೆಯಾದರೂ ಅದು ಪಿತೃಪ್ರಧಾನ ಕುಟುಂಬ ನಿಷ್ಠೆಯನ್ನೇ ಉಳಿಸಿಕೊಂಡು ಬಂದಿದೆ. ಭಾರತದ ಮಹಿಳಾ ಚಳುವಳಿಗಳು ಸಮಾಜದ ಮೂಲಭೂತ ಅಂಗವಾದ ಕುಟುಂಬಗಳ ಕುರಿತಂತೆ ಹಲವಾರು ಪ್ರಶ್ನೆಗಳನ್ನು ಎತ್ತಿವೆ. ಕುಟುಂಬವು ಸ್ತ್ರೀಯರಿಗೆ ಸುರಕ್ಷೆಯನ್ನು ಒದಗಿಸುವ, ಸ್ತ್ರೀಯನ್ನು ಗೌರವಿಸುವ ಸಂಸ್ಥೆಯೇ ಎಂಬುದರ ಪರಿಶೀಲನೆಗೆ ತೊಡಗಿವೆ. ಆದರೂ ಈ ನಾಗರೀಕ ಜಗತ್ತಿನ ಹಲವು ಬಗೆಯ ಹಿಂಸೆಗಳಿಗೆ ಹೆಣ್ಣು ಒಳಗಾಗುತ್ತಲೇ ಬಂದಿದ್ದಾಳೆ. ಮೊದಲಿಗೆ, ಹೆಣ್ಣುಭ್ರೂಣಗಳು ಹಾಗೂ ಹೆಣ್ಣುಶಿಶುಗಳ ಹತ್ಯೆಯು ತವರಿನಲ್ಲಿಯೇ ಎದುರಿಸುವ ಎರಡು ಪ್ರಮುಖ ಹಿಂಸೆಗಳಾಗಿವೆ. ತವರಿನಲ್ಲಿ ಹೆಣ್ಣು ಎದುರಿಸುವ ಇನ್ನೊಂದು ಪ್ರಮುಖ ಹಿಂಸೆ ಲಿಂಗತಾರತಮ್ಯದ್ದಾಗಿದೆ. ಮದುವೆ ಎನ್ನುವ ಸಂಸ್ಥೆಯಿಂದ ಗಂಡನ ಮನೆಯಲ್ಲಿ ಅನುಭವಿಸುವ ಕೌಟುಂಬಿಕ ಹಿಂಸೆಯ ಇನ್ನೊಂದು ಮುಖವನ್ನು ಕಾಣುತ್ತೇವೆ. ಈ ವಿವಾಹ ಸಂಸ್ಥೆಯ ವಿವಿಧ ಮುಖಗಳಾದ ಬಾಲ್ಯವಿವಾಹ, ಬಹುಪತ್ನಿತ್ವ ಅಥವಾ ಪತಿತ್ವ, ವೈಧವ್ಯ, ಪರಿತ್ಯಕ್ತ ಸ್ಥಿತಿಗಳೆಲ್ಲವೂ ಮಹಿಳೆಯ ಮೇಲಿನ ದೌರ್ಜನ್ಯವನ್ನು ತೀವ್ರಗೊಳಿಸುವ ಅಂಶಗಳೇ ಆಗಿವೆ. ಈ ಹಿನ್ನೆಲೆಯಲ್ಲಿ ವಿವಾಹಿತ ಮಹಿಳೆಯ ಸಂದರ್ಭದಲ್ಲಿನ ಕೌಟುಂಬಿಕ ಹಿಂಸೆಗೆ ಕಾರಣವಾಗುವ ಅತ್ಯಾಚಾರ, ವರದಕ್ಷಿಣೆ, ವಿಚ್ಛೇದನ, ವೈಧವ್ಯ, ಅನೈತಿಕ ಸಂಬಂಧ ಇತ್ಯಾದಿಗಳ ಕುರಿತಂತೆ ಸ್ತ್ರೀ ಮೇಲಿನ ಹಿಂಸೆಯ ಸ್ವರೂಪವನ್ನು ವೈದೇಹಿಯವರ ಕತೆಗಳಲ್ಲಿನ ಪಾತ್ರಗಳ ಹಿನ್ನೆಲೆಯಲ್ಲಿ ಪ್ರಸ್ತಾಪಿಸಬಹುದೆಂದು ತೋರುತ್ತದೆ. ಪಿತೃಪ್ರಧಾನ ವ್ಯವಸ್ಥೆಯ ಬಹುಮುಖ್ಯ ಸಂಸ್ಥೆಯಾದ ಕುಟುಂಬವು ಅದರಲ್ಲೂ ಮಧ್ಯಮ ವರ್ಗದ ಬ್ರಾಹ್ಮಣ ಕುಟುಂಬವು ಮೂಲಭೂತವಾಗಿ ಹೇಗೆ ಹೆಣ್ಣನ್ನು ಪರಿಭಾವಿಸುತ್ತದೆ. ಸ್ವೀಕರಿಸುತ್ತದೆ ಎಂಬುದರ ಹಿನ್ನಲೆಯಲ್ಲಿ ಹಿಂಸೆಯ ಸ್ವರೂಪವನ್ನು ಇಲ್ಲಿ ಗ್ರಹಿಸಬಹುದಾಗಿದೆ. ಇದನ್ನು ನಾಗರೀಕ ಸಮಾಜದ ಗುಣಲಕ್ಷಣವನ್ನಾಗಿ ಪರಿಭಾವಿಸಿ ಆಮೂಲಾಗ್ರ ಬದಲಾವಣೆಗಾಗಿ ಒತ್ತಾಯಿಸುವ ಸ್ತ್ರೀಪರ ಚಿಂತನೆಗಳ ಕಡೆಗೂ ಹೆಚ್ಚಿನ ಗಮನ ಹರಿಸಲಾಗಿರುವುದನ್ನು ವೈದೇಹಿಯುವರ ಕಥೆಗಳಲ್ಲಿ ಬರುವ ಸ್ತ್ರೀ ಸಮುದಾಯದ ಹಿನ್ನೆಲೆಯಲ್ಲಿ ಪರಿಶೀಲಿಸುವುದು ಹೆಚ್ಚು ಪ್ರಸ್ತುತವೆಂಬುದನ್ನು ಈ ಅಧ್ಯಾಯ ಪರಿಶೀಲಿಸುತ್ತದೆ.

ಹಿಂಸೆಯ ಪರಿಕಲ್ಪನೆಯನ್ನು ವಿವಾಹದ ಚೌಕಟ್ಟಿನಲ್ಲಿ ದೈಹಿಕ ಹಿಂಸೆ ಹಾಗೂ ಮಾನಸಿಕ ಹಿಂಸೆಯನ್ನು ಅನುಭವಿಸುವ ಮನೆಯ ಹೆಣ್ಣುಮಕ್ಕಳು, ಸೊಸೆ, ವಿಧವೆ, ವಯಸ್ಸಾದ ಅತ್ತೆ ಇತ್ಯಾದಿ ಎಲ್ಲ ಸಂಬಂಧಗಳ ಸಂದರ್ಭವಲ್ಲಿ ಹೆಣ್ಣು ಹಿಂಸೆಯನ್ನು ಅನುಭವಿಸುವುದನ್ನು ಗುರುತಿಸಿ, ಅದರ ವಿರುದ್ಧ ಸೂಕ್ಷ್ಮ ಬಗೆಯ ಪ್ರತಿರೋಧಗಳನ್ನು ಒಡ್ಡುವುದನ್ನು ವೈದೇಹಿಯವರ ಕಥೆಗಳಲ್ಲಿ ಗುರುತಿಸಬಹುದಾಗಿದೆ. ಇದಕ್ಕೆ ಹಿನ್ನೆಲೆಯಾಗಿ, ವಿಧವಾ ಹಾಗೂ ಸತಿಸಹಗಮನ ಪದ್ಧತಿಗಳು ಒಂದೇ ನಾಣ್ಯದ ಎರಡು ಮುಖಗಳಂತೆ ವಸಾಹತು ಕಾಲಘಟ್ಟದ

ಭಾರತದಲ್ಲಿ ಅಸ್ತಿತ್ವದಲ್ಲಿತ್ತು. ಸತಿಯಿಂದ ಉಳಿಯುವ ಸ್ತ್ರೀಯು ಅಷ್ಟೇ ಅಮಾನವೀಯವಾದ ವೈಧವ್ಯವನ್ನು ಅನುಭವಿಸುತ್ತ ಜೀವಂತ ಶವವಾಗಿ ಬದುಕುಳಿಯಬೇಕಾದ ಸಮಸ್ಯೆಯು ಅಂದಿನ ಸಮಾಜ ಸುಧಾರಕರನ್ನು ಕಾಡಿತ್ತು. ಅಷ್ಟರಮಟ್ಟಿಗೆ ಪ್ರಮುಖ ಮಹಿಳಾ ವಿಷಯವಾಗಿ ಈ ವೈಧವ್ಯವು ಮುಂಚೂಣಿಯಲ್ಲಿತ್ತು.

ವೈದೇಹಿಯವರ **'ಅಕ್ಕು'** ವಿನಂತಹ ಕತೆಯಲ್ಲಿ ಕೌಟುಂಬಿಕ ಜಗತ್ತಿನ ಹೆಣ್ಣು ಪಡೆಯುವ ಬಿಡುಗಡೆಯ ಭಿನ್ನ ದಾರಿಯನ್ನು, ಪರಿಹಾರದ ಸಾಧ್ಯತೆಯನ್ನು ಗುರುತಿಸಬಹುದಾಗಿದೆ. ಲೋಕಕ್ಕೆ ಹುಚ್ಚಾಗಿ ಕಾಣಿಸುವುದು ಅಕ್ಕುವಿಗೆ ಬಿಡುಗಡೆಯ ದಾರಿಯಾಗಿದೆ. ಆ ಹುಚ್ಚಿನಲ್ಲಿ ಆಕೆ ನಾಗರೀಕತೆಯ ಕ್ರೌರ್ಯದ ವಿರುದ್ಧ ಬಂಡಾಯ ಸಾರುತ್ತಾಳೆ. ಆ ಹುಚ್ಚಿನಲ್ಲಿ ಆಕೆ ಹೇಳುವ ಪರಮಸತ್ಯಗಳು, ನಾಗರೀಕ ಲೋಕವನ್ನು, ಅದು ಜೀರ್ಣಿಸಿಕೊಳ್ಳಲಾಗದ ಅಸಹಾಯಕತೆಗೆ ನಮ್ಮನ್ನು ತಂದು ನಿಲ್ಲಿಸಿಬಿಡುತ್ತದೆ. ಇಲ್ಲಿ ನಾಗರೀಕ ಜಗತ್ತಿನ ಕ್ರೌರ್ಯದ ವಿರುದ್ಧದ ಸತ್ಯಗಳನ್ನು ಕೂಡ ಕತೆ ನಮ್ಮ ಮುಂದಿಡುತ್ತದೆ. ಅಕ್ಕುವಿನ ಪಾತ್ರದ ಮೂಲಕ ಅಸ್ತಿತ್ವವನ್ನು ಸ್ಥಾಪಿಸಲು ಪ್ರಯತ್ನಿಸುವ ಹೆಣ್ಣಿನ ಸಮಸ್ಯೆಯನ್ನು ಕಾಣಬಹುದಾಗಿದೆ. ತನ್ನೆಲ್ಲಾ ಆಸೆ-ಆಕಾಂಕ್ಷೆಗಳನ್ನು ಸಮಾಜದ ಕ್ರೌರ್ಯದ ನಡುವೆಯೇ ಈಡೇರಿಸಿಕೊಳ್ಳಬೇಕೆಂಬ ಬಯಕೆ ಅಕ್ಕುವಿನ ವರ್ತನೆಯಲ್ಲಿ ವ್ಯಕ್ತವಾಗಿದೆ. ಇದಕ್ಕೆ ನೆರವಾಗಿ ಈ ವ್ಯವಹಾರ ಪ್ರಪಂಚವು ಕಾದು ನಿಂತಿದೆ.

ವೈದೇಹಿಯವರ ಕತೆಗಳಲ್ಲಿ ಸ್ತ್ರೀ ವಿಶೇಷಗಳ ಅನಾವರಣವನ್ನು ಗುರುತಿಸಬಹುದಾಗಿದೆ. ಹೆಣ್ಣು ತಾನು ಹೆಣ್ಣಾಗಿರುವುದರ ಬಗ್ಗೆ ಅಪಾರ ಆತ್ಮವಿಶ್ವಾಸ, ಧನ್ಯತೆಯನ್ನು ಅನುಭವಿಸುವುದನ್ನು ಕತೆಗಳಲ್ಲಿ ಅನಾವರಣ ಮಾಡುತ್ತಾರೆ. ಕಟು ವಾಸ್ತವದಾಚೆಗೆ ಹೆಣ್ಣು ಜತನದಿಂದ ಕಾಪಾಡಿಕೊಂಡು ಬಂದಿರುವ ಜೀವ ಚೈತನ್ಯದ ಮೂಲವನ್ನು ಹುಡುಕುವ ಪ್ರಯತ್ನ ಮಾಡುತ್ತಾರೆ. ಈ ಮೂಲದ ಆವಿಷ್ಕಾರದಲ್ಲಿ ಹೆಣ್ಣಿನ ಶಕ್ತಿ ಸೌಂದರ್ಯಗಳನ್ನು ಗುರುತಿಸಿ ಹೆಣ್ಣಿನ ಬದುಕಿಗೆ ಒಂದು ಅರ್ಥವನ್ನು ಗುರಿಯನ್ನು ಹುಡುಕುವ ಆಶಯವಿದೆ. ಅವರ ಕತೆಗಳಲ್ಲಿ ಅಧೀನ ಬದುಕಿನೊಳಗೂ ಇರಬಹುದಾದ ಬದುಕಿನ ಸಾರ್ಥಕ ಗಳಿಗೆಗಳನ್ನು ಹಿಡಿಯುವ ಪ್ರಯತ್ನವಿದೆ.

ವೈದೇಹಿಯವರ ಹಲವು ಕತೆಗಳಲ್ಲಿ ಬರುವ ಸ್ತ್ರೀಪಾತ್ರಗಳು ಆಧುನಿಕತೆಗೆ ಒಡ್ಡಿಕೊಂಡ ಹಾಗೂ ಒಡ್ಡಿಕೊಳ್ಳಲು ಪ್ರಯತ್ನಿಸುವುದರ ಚಿತ್ರಣವಿದೆ. ಮಧ್ಯಮ ವರ್ಗದ ಕೌಟುಂಬಿಕ ಸಂಬಂಧಗಳು, ಅಲ್ಲಿನ ಸೂಕ್ಷ್ಮ ಬಗೆಯ ರಾಜಕಾರಣ ಹಾಗೂ ಹೆಣ್ಣಿನ ಸೂಕ್ಷ್ಮ ಬಗೆಯ ಭಾವನಾತ್ಮಕ ಸಂಘರ್ಷಗಳ ನಿರೂಪಣೆ ಇವರ ಕತೆಗಳಲ್ಲಿವೆ. ಅವು ಓದುಗರ ಗಮನ ಸೆಳೆಯುತ್ತವೆ. ಗಂಡು-ಹೆಣ್ಣಿನ ಲೈಂಗಿಕ ಸಂಬಂಧಗಳು, ವಿವಾಹವೆಂಬ ಅಧಿಕಾರ ಕೇಂದ್ರದ ಸುತ್ತ ಜರುಗುವ ವೈರುಧ್ಯ ಹಾಗೂ ಬಿಕ್ಕಟ್ಟುಗಳನ್ನು ಇವರ ಕತೆಗಳು ಪರಿಶೀಲಿಸುತ್ತವೆ.

ಮೂಲಭೂತ ಲೈಂಗಿಕ ಪ್ರಶ್ನೆಗಳು, ನೈತಿಕತೆಯ ಪ್ರಶ್ನೆಗಳು, ಅಸ್ತಿತ್ವದ ಪ್ರಶ್ನೆ, ಯಜಮಾನೀ ನೆಲೆಗಳನ್ನು ಬಹು ಸೂಕ್ಷ್ಮ ರೀತಿಯಲ್ಲಿ ಪರಿಶೋಧಿಸುತ್ತವೆ. ಇಲ್ಲಿನ ಸ್ತ್ರೀ ಲೋಕದ ಪುರುಷಪರ, ವಿರೋಧಿ, ಸಹಕಾರಿ ಹಾಗೂ ಸ್ವಾಯತ್ತತೆ ಮುಂತಾದ ಬಹುಸ್ತರಿಯ ಮನಃಸ್ಥಿತಿಗಳನ್ನು ಮುಖ್ಯ ನೆಲೆಯಾಗಿರಿಸಿಕೊಂಡು ಇಲ್ಲಿಯ ಕತೆಗಳು ಚರ್ಚಿಸುತ್ತವೆ. ಆಧುನೀಕರಣದ ಸಂದರ್ಭದಲ್ಲಿ ಸ್ಥಾಪಿತ ಪಿತೃಪ್ರಧಾನ ವ್ಯವಸ್ಥೆಯ ರೂಢಿಗತ ಮೌಲ್ಯಗಳನ್ನು ಬುಡಮೇಲಾಗಿಸುವ ಸೂಕ್ಷ್ಮ ತಂತ್ರಗಳು, ಪ್ರತಿರೋಧಗಳು, ಪರ್ಯಾಯ ಮೌಲ್ಯಗಳ ಸಾಧ್ಯತೆಗಳು ಹಾಗೂ ಸಮಾನತೆಯ ಆಶಯಗಳನ್ನು ವೈದೇಹಿಯವರು ತಮ್ಮ ಕತೆಗಳಲ್ಲಿ ಕಟ್ಟಿಕೊಡುವ ಪ್ರಯತ್ನಮಾಡಿದ್ದಾರೆ.

ವಾಸ್ತವತೆಯ ಪ್ರತಿಪಾದನೆ, ಸ್ವಪ್ರಜ್ಞೆ, ಸಮಾಜ ವಿಮರ್ಶೆ, ಪ್ರತಿಭಟನೆ, ವೈಚಾರಿಕತೆ, ಅಂತರ್ಮುಖಿತೆ ಮುಂತಾದ ಲಕ್ಷಣಗಳು ವೈದೇಹಿಯವರ ಕತೆಗಳ ವೈಶಿಷ್ಟ್ಯವಾಗಿದೆ. ಪಿತೃರೂಪಿ ಲಿಂಗವ್ಯವಸ್ಥೆಯಲ್ಲಿ ಶೀಲ ಅಥವಾ ಪಾತಿವ್ರತ, ನೈತಿಕತೆ, ಲೈಂಗಿಕ ಹಕ್ಕು ಎನ್ನುವುದು ಹೆಣ್ಣಿಗಷ್ಟೇ ಸಂಬಂಧಿಸಿದ ಪರಿಕಲ್ಪನೆಯಾಗಿದೆ. ವೈದೇಹಿಯವರ ಇಂತಹ ಏಕಮುಖಿ ನಿಲುವುಗಳನ್ನು ಇಲ್ಲಿ ಪ್ರಶ್ನಿಸುತ್ತಾರೆ. ಹೆಣ್ಣಿನ ಇಡಿಯಾ ವ್ಯಕ್ತಿತ್ವವನ್ನು ಶೀಲದೊಂದಿಗೆ, ಲೈಂಗಿಕತೆಯೊಂದಿಗೆ ಸಮೀಕರಿಸುವುದನ್ನು ವಿರೋಧಿಸುತ್ತಾರೆ. ಕೌಂಟುಂಬಿಕ ಕೆಲಸ ಮತ್ತು ಜವಾಬ್ದಾರಿಗಳು ಉತ್ಪಾದನಾ ಸಂಬಂಧಗಳು ಲಿಂಗಾಸಾಪೇಕ್ಷ ಮೊದಲಾದ ಪಾರಂಪರಿಕ ನೆಲೆಗಳನ್ನು ಮೀರಿ, ಗಂಡು ಹೆಣ್ಣಿಗೆ ಸಮಾನವಾಗಿ ಹಂಚಿಕೆಯಾಗಬೇಕು ಎನ್ನುವ ಹಕ್ಕೋತ್ತಾಯ **'ಓ ಜಗತ್ತೆ', 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು'** ಮೊದಲಾದ ಕತೆಗಳಲ್ಲಿ ಕಂಡುಬರುತ್ತದೆ. ಲಿಂಗ ತಾರತಮ್ಯವಿಲ್ಲದೆ ಯಾರು ಯಾವ ಬಗೆಯ ಕೆಲಸವನ್ನಾದರೂ ಮಾಡಬಹುದು ಎಂಬ ನಿಲುವಿನೊಂದಿಗೆ ಹೆಣ್ಣು ಸಮಾನ ಜವಾಬ್ದಾರಿ ಹೊರುವ ಸಂದರ್ಭಗಳನ್ನು ಕಟ್ಟುವ ಕಡೆಗೆ ವೈದೇಹಿಯವರು ಆಸಕ್ತರಾಗಿದ್ದಾರೆ.

ಮಧ್ಯಮ ವರ್ಗದ ಹೆಣ್ಣಿನ ಸಾಮಾಜಿಕ ಬದುಕಿನ ಅನುಭವಗಳನ್ನು ಕತೆಗಳಲ್ಲಿ ಕಟ್ಟಿಕೊಡುವುದು ವೈದೇಹಿಯವರ ಕತೆಗಳ ಮತ್ತೊಂದು ವೈಶಿಷ್ಟ್ಯ. ಹೆಣ್ಣಿನ ಅಂತರಂಗದ ಭಾವನೆಗಳ ತೊಳಲಾಟವನ್ನು, ಅನುಭವದ ತೀವ್ರತೆಯನ್ನು ಸ್ವಗತ ಶೈಲಿಯಲ್ಲಿ ಹೇಳಿರುವುದನ್ನು" **ಸೌಗಂಧಿಯ ಸ್ವಗತ"** ಎಂಬ ಕತೆಯಲ್ಲಿ ಕಾಣಬಹುದಾಗಿದೆ. ಈ ಕತೆಯ ನಾಯಕಿಯು ತನ್ನ ಸ್ವತಂತ್ರ್ಯವನ್ನು ಮದುವೆ ಎಂಬ ರಕ್ಷಣೆಯ ಹೆಸರಿನಲ್ಲಿ ಕಳೆದುಕೊಂಡವಳು. ಸೌಂಗಧಿಯ ಅಪ್ಪ ಅವಳ ಬಗ್ಗೆ ವಿಪರೀತ ಕಾಳಜಿ ತೋರುತ್ತಿರುತ್ತಾನೆ. ಆದರೆ ಆಕೆಗೆ ಈ ವಿಪರೀತ ಪ್ರೀತಿ, ಕಾಳಜಿಗಳು ಮನೆಯ ಪರಿಸರ ಹಿಂಸೆ ಎನಿಸುತ್ತದೆ. ಕುಟುಂಬದ ಬಂಧನದಿಂದ ದೂರವಿರಬೇಕೆಂದು ಬಯಸಿದ ಸೌಗಂಧಿ ಬಾಡಿಗೆ ಮನೆಯಲ್ಲಿಯಾದರು ಸ್ವತಂತ್ರ್ಯವಾಗಿ ಇರಲು ಬಯಸುತ್ತಾಳೆ. ಅದರೆ ಅಲ್ಲಿಯ ಆ ಮನೆಯೊಡತಿಯು ಇವಳ ಬಗ್ಗೆ ತೋರುವ ಪ್ರೀತಿ, ಕಾಳಜಿಯು ಕೂಡ ಇವಳಿಗೆ ಬಂಧನವೆನಿಸುತ್ತದೆ. ಯೌವನದ ಹಲವು ಬಯಕೆಗಳನ್ನು ಹೊತ್ತು ವಿಶೇಷ ಅನುಭವಕ್ಕಾಗಿ ಕಾತರಿಸುವ ಅವಳು ಯಾವುದನ್ನು ಅಭಿವ್ಯಕ್ತಿಸಲಾಗದೆ ಚಡಪಡಿಸುತ್ತಾಳೆ. ಒಳ್ಳೆತನದ ಹೆಸರಿನಲ್ಲಿ ಅವಳ ಸುತ್ತಲಿನ ಪರಿಸರ ಅವಳ ಯೌವನವನ್ನೇ ಕಸಿದುಕೊಳ್ಳುತ್ತದೆ. ಕೊನೆಗೆ ಯಾವ ಅನುಭವವನ್ನು ಪಡೆಯದ ಅವಳು 'ನಗಲು ಆಗದೇ ಅಳಲು ಆಗದೇ' ತನ್ನೊಳಗೆ ಹೊಯ್ದಾಟವನ್ನು ಅನುಭವಿಸುತ್ತಾಳೆ. ಇಲ್ಲಿ ಸೌಗಂಧಿ ಆರ್ಥಿಕವಾಗಿ ಸ್ವತಂತ್ರ್ಯವಾಗಿದ್ದರೂ, ಬೌದ್ಧಿಕ ನಿಯಂತ್ರಣಕ್ಕೆ ಒಳಗಾಗಿದ್ದಾಳೆ. ತನ್ನ ಮನಸ್ಸಿನ ಭಾವನೆಗಳನ್ನು ಬಿಚ್ಚಿಡುವ ಅಭಿವ್ಯಕ್ತಿ ಸ್ವತಂತ್ರ್ಯವನ್ನೇ ಒಟ್ಟಿನಲ್ಲಿ ಕಳೆದುಕೊಳ್ಳುತ್ತಾಳೆ. ಹೀಗೆ ಒಂದು ಹೆಣ್ಣಿನ ಮಾನಸಿಕ ಹಾಗೂ ದೈಹಿಕ ತುಮುಲಗಳು ಅಂದರೆ ಮಾನಸಿಕ ದುರ್ಬಲತೆ ದ್ವಂದ್ವತೆ ಸಿನಿಕತನ ಗಳಿಗೆ ಒಳಗಾಗದ ಹೆಣ್ಣಿನ ಚಿತ್ರಣವಿದೆ. ಹೀಗೆ ಸ್ತ್ರೀಸಂಯೋಜನೆಯ ಜೊತೆಗೆ ಬದುಕಿನ ಹಲವು ಮಗ್ಗಲುಗಳನ್ನು ಇವರ ಕತೆಗಳು ಚಿತ್ರಿಸುತ್ತವೆ.

ಈ ಬಗೆಯ ಪರಂಪರಾಗತ ಸ್ಥಾಪಿತ ಮೌಲ್ಯಗಳಿಗೆ ಮೀರಿದ ಹೊಸ ಮೌಲ್ಯಗಳ ಹುಡುಕಾಟದ ಸ್ತ್ರೀ ಸಂವೇದನೆಗಳ ಚಿತ್ರಣ ವೈದೇಹಿಯವರ ಹಲವು ಕತೆಗಳಲ್ಲಿ ಕಾಣಬಹುದಾಗಿದೆ. **'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು', 'ಆಭಾ'** ಮೊದಲಾದ ಕತೆಗಳ ನಾಯಕಿಯರು ಆರ್ಥಿಕ ಸ್ವಾವಲಂಬಿಕ ಸ್ಥಿತಿಯನ್ನು

ಹೊಂದಿರುವುದರಿಂದ ಕೆಲಮಟ್ಟಿನ ಸ್ವಾತಂತ್ರ್ಯ ಹಾಗೂ ಬದುಕಿನ ಬಗ್ಗೆ ತನ್ನದೇ ಆದ ಅಭಿಪ್ರಾಯ ಹೊಂದಿರುವವರಾಗಿದ್ದಾರೆ. **"ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು"** ಎಂಬ ಕತೆಯಲ್ಲಿ ಲಿಲ್ಲೀಬಾಯಿ ಹೊಸ ಮೌಲ್ಯಗಳೊಂದಿಗೆ ಬದುಕನ್ನು ರೂಪಿಸಿಕೊಳ್ಳುವುದನ್ನು ಕಾಣುತ್ತೇವೆ. ಇಲ್ಲಿ ಸ್ತ್ರೀ ಸ್ವಾತಂತ್ರ್ಯತೆ ಸಮಾನತೆ ಕಾಳಜಿಯೊಂದಿಗೆ ಪುರುಷ ಪ್ರಧಾನ ವ್ಯವಸ್ಥೆಯ ನಿಯಂತ್ರಣಗಳಿಂದ ಬಿಡಿಸಿಕೊಂಡು, ಮುಕ್ತವಾಗಿ ವಿಹರಿಸಬೇಕೆನ್ನುವ ಪ್ರಯತ್ನವಿದೆ.

ಒಟ್ಟಿನಲ್ಲಿ ಉತ್ಪಾದನೆಯ ಕ್ಷೇತ್ರದಲ್ಲಿ ಸ್ತ್ರೀಯೂ ಪುರುಷನಿಗೆ ಸಮಾನವಾಗಿ ತನ್ನನ್ನು ತೊಡಗಿಸಿಕೊಂಡಾಗಲೇ ಅವಳಿಗೆ ತನ್ನ ದಾಸ್ಯದಿಂದ ಬಿಡುಗಡೆ ಹೊಂದಲು ಸಾದ್ಯವೆಂಬುದು ವೈದೇಹಿಯವರ ಕತೆಗಳ ಮುಖ್ಯ ಚಿಂತನೆಯಾಗಿದೆ. ಇದಕ್ಕೆ ಕಾರಣ ಶೈಕ್ಷಣಿಕವಾಗಿ - ಸಾಮಾಜಿಕವಾಗಿ ಇಂದು ಅನೇಕ ಅವಕಾಶಗಳನ್ನು ಪಡೆಯುತ್ತಿರುವುದರಿಂದ ಸ್ತ್ರೀ ಸ್ವತಂತ್ರ - ಸಮಾನತೆ - ಅಸ್ತಿತ್ವದ ಕುರಿತು ಆಲೋಚಿಸುವಂತಾಯಿತು ಎಂಬುದು ಗಮನಾರ್ಹವಾದ ವಿಚಾರವಾಗಿದೆ.

<u>ಅಡಿಟಿಪ್ಪಣಿ</u> :-

೧. ಅರಿವಿನ ನಡೆ, ಕವಿತಾ ರೈ, ಲೋಹಿಯಾ ಪ್ರಕಾಶನ, ಕ್ಷಿತಿಜ ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩೧೦೩, ೨೦೦೭ ಪುಟ - ೪೪ , ೪೫

೨. ಅದೇ, ಪುಟ - ೪೯

೩. ಅದೇ, ಪುಟ - ೬೧

೪. ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ - ಕರ್ನಾಟಕ ಸಾಹಿತ್ಯ ಅಕಾಡೆಮಿ , ಬೆಂಗಳೂರು, ೨೦೦೬ ಪುಟ- ೩

೫. ಸಾಹಿತ್ಯ ವಿಮರ್ಶೆ, ಸಿ. ಎನ್ ರಾಮಚಂದ್ರನ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೦, ಪುಟ - ೮೭ - ೮೮

೬. ಸಾಹಿತ್ಯ ಸಂಸ್ಕೃತಿ, ನರಹಳ್ಳಿ ಬಾಲ ಸುಬ್ರಹ್ಮಣ್ಯ,ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು, ೧೯೯೮, ಪುಟ - ೨೩

೭. ಸಾಹಿತ್ಯ ವಿಮರ್ಶೆ, ಸಿ. ಎನ್ ರಾಮಚಂದ್ರನ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೨೦೦೦ ಪುಟ - ೮೭ - ೮೮

೮. ಅಲೆಗಳಲ್ಲಿ ಅಂತರಂಗ, ವೈದೇಹಿಯವರ ಸಮಗ್ರ ಕತೆಗಳ ಸಂಕಲನ ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ, ಕರ್ನಾಟಕ. ೨೦೦೬. ಪುಟ - ೩೫೫

೯. ಅದೇ, ಪುಟ - ೩೬೨

೧೦. ಅದೇ, ಪುಟ - ೩೬೫

೧೧. ಡಾ. ಎಚ್. ಎಸ್. ಶ್ರೀಮತಿ, ಚಹರೆ, ಇಳಾ ಪ್ರಕಾಶನ, ಬೆಂಗಳೂರು,೧೯೯೯, ಪುಟ- ೭೬

೧೨. ಅದೇ, ಪುಟ - ೭೭

**********

# ಅಧ್ಯಾಯ - ೩

## ಕೆಲವು ಕತೆಗಳ ಪರಿಶೀಲನೆ:

೧. ಕುಟುಂಬದ ನೆಲೆ

೨. ವ್ಯಕ್ತಿಗತ ನೆಲೆ

೩. ಸಾಮಾಜಿಕ ನೆಲೆ

# ಅಧ್ಯಾಯ – ೩

## ಕೆಲವು ಕತೆಗಳ ಪರಿಶೀಲನೆ

ವೈದೇಹಿಯವರ ಬರವಣಿಗೆಯಲ್ಲಿ ಸ್ತ್ರೀವಾದ ಎನ್ನುವುದು ಬದುಕಿನ ಹೋರಾಟದಲ್ಲಿ ತನ್ನಿಂದತಾನೇ ಅನಾವರಣಗೊಳ್ಳುವ ನಂತರ ಪ್ರಕ್ರಿಯೆಯಾಗಿದೆ. ಬದುಕನ್ನು ಕುರಿತ ಹೆಣ್ಣಿನ ಅದಮ್ಯ ಎಂದು ಕರೆಯಬಹುದಾದ ಪ್ರೀತಿಯೇ ಸ್ತ್ರೀವಾದದ ಮೂಲವಾಗಿ ಇಲ್ಲಿ ಕಾಣಿಸಿಕೊಳ್ಳುತ್ತದೆ. ಬದುಕನ್ನು ಕುರಿತ ಹೆಣ್ಣಿನ – ಪ್ರೀತಿ, ಬದ್ಧತೆ ಮತ್ತು ಶ್ರದ್ಧೆ ಇವುಗಳಿಗೆ ವೈದೇಹಿಯವರು ತಮ್ಮ ಕತೆಗಳಲ್ಲಿ ಉದ್ದಕ್ಕೂ ಹೆಚ್ಚಿನ ಒತ್ತು ಕೊಡುತ್ತಾ ಹೋಗುತ್ತಾರೆ. ಹೆಣ್ಣನ್ನು ಅವಳ ಎಲ್ಲಾ ಸಾಧ್ಯತೆಯಲ್ಲಿ ಪರೀಕ್ಷಿಸುತ್ತಲೇ, ಬದುಕು ಒಡ್ಡುವ ಎಲ್ಲ ಸವಾಲುಗಳನ್ನು ಅವಳು ಎದುರಿಸುವ ವಿವರಗಳನ್ನು ಮಂಡಿಸುತ್ತಲೇ, ಪರೋಕ್ಷವಾಗಿ ವ್ಯವಸ್ಥೆಯನ್ನು ಪ್ರಶ್ನಿಸುತ್ತಾ ಹೋಗುತ್ತಾರೆ.

ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನದ ಪ್ರಶ್ನೆಯನ್ನಿಟ್ಟುಕೊಂಡು ಇವರ ಕತೆಗಳನ್ನು ಚರ್ಚಿಸಬಹುದಾಗಿದೆ. ಹೆಣ್ಣಿನ ಬದುಕು ರೂಪುಗೊಳ್ಳುವಲ್ಲಿ ಸಮಾಜ ಯಾವ ರೀತಿಯ ಧೋರಣೆಯನ್ನು ಒಳಗೊಂಡಿದೆ?. ಸಮಾಜದ ವ್ಯಕ್ತಿ, ಧರ್ಮ, ಜಾತಿ, ಕುಟುಂಬ ಮೊದಲಾದವುಗಳು ಹೆಣ್ಣಿನ ಮೇಲೆ ಹೇರುವ ಒತ್ತಡಗಳನ್ನು ಗುರುತಿಸಿ, ಅವುಗಳನ್ನು ವಿರೋಧಿಸುವ ಲೇಖಕಿಯ ನಿಲುವುಗಳನ್ನು ಅವರ ಕತೆಗಳಲ್ಲಿ ಗುರುತಿಸಬಹದಾಗಿದೆ. ನಗರ ಕೇಂದ್ರಿತ ಪ್ರದೇಶಗಳಲ್ಲಿ, ಗ್ರಾಮೀಣ ಪರಿಸರದಲ್ಲಿ ಚಾಲ್ತಿಯಲ್ಲಿರುವ ಮೌಲ್ಯಗಳು ಹೆಣ್ಣನ್ನು ವಿವಿಧ ನೆಲೆಗಳಲ್ಲಿ ಶೋಷಿಸುತ್ತಿರುವುದನ್ನು ವೈದೇಹಿಯವರು ತಮ್ಮಕತೆಗಳಲ್ಲಿ ಚಿತ್ರಿಸಿದ್ದಾರೆ. ಸಾಂಪ್ರದಾಯಿಕತೆ ಮತ್ತು ಆಧುನಿಕ ನೆಲೆಯಲ್ಲಿ ನಡೆಯುವ ಸಂಘರ್ಷವನ್ನು ಗುರುತಿಸಲು ಲೇಖಕಿ ಇಲ್ಲಿ ಪ್ರಯತ್ನಿಸಿದ್ದಾರೆ.

ಕೌಟುಂಬಿಕ ಜಗತ್ತಿನಲ್ಲಿ ಜರುಗುವ ಹಲವು ಘಟನೆಗಳನ್ನು, ಹಲವು ಸನ್ನಿವೇಶಗಳನ್ನು ಮುಖಾಮುಖಿಯಾಗಿಸುವುದರ ಮೂಲಕ ಕುಟುಂಬದಲ್ಲಿ ಹೆಣ್ಣು ಹೊಂದಿರುವ ಪ್ರಾಮುಖ್ಯತೆಯನ್ನು ಇವರ ಹಲವು ಕತೆಗಳು ಚರ್ಚಿಸುತ್ತವೆ. ಕುಟುಂಬದಲ್ಲಿ ಹೆಣ್ಣು ಗಂಡಿನ ನಡುವೆ ನಡೆಯುವ ಸಂಘರ್ಷ, ನಿಯಂತ್ರಣ, ಅಧಿಕಾರದ ಕೇಂದ್ರಿಕರಣ, ಕುಟುಂಬದ ಸಂಪ್ರದಾಯಗಳು , ವೈವಾಹಿಕ ಸಂಬಂಧಗಳು, ಹಿರಿಯರ ಕಿರಿಯರ ನೆಲೆಯಲ್ಲಿ ನಡೆಯುವ ನಿಯಂತ್ರಣ ಮೊದಲಾದವುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುವುದು ಇವರ ಹಲವಾರು ಕತೆಗಳ ಆಶಯವಾಗಿದೆ. ಕುಟುಂಬದ ಒತ್ತಡಗಳಿಂದ ಹೆಣ್ಣು ಅನುಭವಿಸುವ ಮಾನಸಿಕ ಯಾತನೆ, ದೈಹಿಕ ಹಿಂಸೆ, ದೌರ್ಜನ್ಯಗಳನ್ನು ಗುರುತಿಸಿ ಅವುಗಳಿಗೆ ಪರಿಹಾರವನ್ನು ಕಂಡುಕೊಳ್ಳುವ ದಿಕ್ಕಿನಲ್ಲಿ ಮಹಿಳೆಯರು ಯೋಚಿಸುವಂತೆ ಇವರ ಕತೆಗಳು ಒತ್ತಾಯಿಸುತ್ತವೆ.

ವ್ಯಕ್ತಿಗತ ನೆಲೆಯಲ್ಲಿ ಹೆಣ್ಣು ಒಬ್ಬ ವ್ಯಕ್ತಿಯಾಗಿ ಸಮಾಜದ ವ್ಯಕ್ತಿಗಳಿಂದ ಹೇಗೆ ನಿಯತ್ರಂಣಕ್ಕೆ ಒಳಗಾಗುತ್ತಾಳೆ. ಜೊತೆಗೆ ಎಲ್ಲ ಕಟ್ಟುಪಾಡುಗಳನ್ನು ಮೀರಿ ತನ್ನತನವನ್ನು ಹೇಗೆ ಸ್ಥಾಪಿಸಿಕೊಳ್ಳುತ್ತಾಳೆ ಎಂಬುದರ ಚಿತ್ರಣವು ಇವರ ಕತೆಗಳ ಪ್ರಮುಖವಾದ ಅಂಶಗಳಲ್ಲೊಂದಾಗಿದೆ. ಹೆಣ್ಣು ಗಂಡಿನ ನಡುವೆ ನಡೆಯುವ ಭಾವನಾತ್ಮಕ ಸಂಘರ್ಷ, ಹೆಣ್ಣಿನ ಮನಸ್ಸಿನಲ್ಲಿ ನಡೆಯುವ ತುಮುಲಗಳು, ಚೌಕಟ್ಟನ್ನು ಮೀರ ಬಯಸುವ ಅವಳ ಮನಸ್ಥಿತಿಯ ಚಿತ್ರಣ, ಮತ್ತೆ ಚೌಕಟ್ಟಿನೊಳಗೆ ತನ್ನನ್ನು ಬಂಧಿಯಾಗಿಸಿಕೊಳ್ಳಲು ಬಯಸುವ ಹೆಣ್ಣಿನ ಚಿತ್ರಣಗಳನ್ನು ವೈದೇಹಿಯವರ ಕತೆಗಳಲ್ಲಿ ಕಾಣಬಹುದಾಗಿದೆ. ಎಲ್ಲವನ್ನು ಮುಚ್ಚಿಟ್ಟುಕೊಳ್ಳುವುದು, ಒಮ್ಮೆಲೇ ಹೇಳಲು ಪ್ರಯತ್ನಿಸುವುದು, ಪರಕೀಯತೆ, ಒಂಟಿತನ, ಚಹರೆ, ಅಪರಿಚಿತತೆಯನ್ನು ಮೀರುವ ಹಂಬಲ, ಹೆಣ್ಣಿನ ಸಹಜ ಆಸೆ, ಕನಸುಗಳು ಮೊದಲಾದವುಗಳನ್ನು ವಸ್ತುವಾಗಿರಿಸಿಕೊಂಡು ವೈದೇಹಿಯವರು ಕತೆಗಳನ್ನು ರಚಿಸಿದ್ದಾರೆ.

ಲಿಂಗರಾಜಕಾರಣವನ್ನು ಪ್ರಶ್ನಿಸುವ ಅಲ್ಲಗಳೆಯುವ ಮನೋಧರ್ಮವನ್ನು ವೈದೇಹಿಯವರ ಕತೆಗಳ ಸ್ತ್ರೀ ಪಾತ್ರಗಳಲ್ಲಿ ಕಾಣಬಹುದಾಗಿದೆ. ಆರ್ಥಿಕ ನೆಲೆ, ಕೌಟುಂಬಿಕ ನೆಲೆ, ಸಾಮಾಜಿಕ ನೆಲೆ, ಲೈಂಗಿಕ ನೆಲೆ, ಹೀಗೆ ಹಲವು ಮಜಲುಗಳಲ್ಲಿ ಪುರುಷರೂಪಿ ಸಮಾಜ ರೂಪಿಸಿದ ಮೌಲ್ಯಗಳು ಹೆಣ್ಣನ್ನು ಶೋಷಿಸುತ್ತಿರುವುದನ್ನು ಲೇಖಕಿ ತಮ್ಮ ಕತೆಗಳ ಮೂಲಕ ಗುರುತಿಸಿದ್ದಾರೆ. ಅಲ್ಲದೆ ಲಿಂಗರಾಜಕಾರಣವನ್ನು ಮೀರಿ ಹೆಣ್ಣು ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸಬೇಕು ಎಂಬುದು ಇಲ್ಲಿನ ಕತೆಗಳ ಆಶಯವಾಗಿದೆ.

ಸ್ವಾತಂತ್ರ್ಯವಿಲ್ಲದ ಮಹಿಳೆಯರ ಹುಡುಕಾಟ, ಅವರ ಯಾತನೆಗಳ ವಿಭಿನ್ನ ಮಾದರಿಗಳು, ಸಂಪ್ರದಾಯಬದ್ಧ ಜೀವನಕ್ರಮ ಮತ್ತು ಹೊಯ್ದಾಟಗಳು, ಕೆಳವರ್ಗದ ಮತ್ತು ತುಳಿತಕ್ಕೆ ಒಳಗಾದ ಜನರ ಜೀವನಕ್ರಮ, ಮೊದಲಾದವುಗಳನ್ನು ಅವರ ಕತೆಗಳು ಚಿತ್ರಿಸುತ್ತವೆ. ಕೌಟುಂಬಿಕ ಹಿನ್ನಲೆಯಲ್ಲಿ, ಸಾಮಾಜಿಕ ಮತ್ತು ವ್ಯಕ್ತಿಗತ ಹಿನ್ನಲೆಯಲ್ಲಿ, ಹೆಣ್ಣಿನ ಸಮಸ್ಯೆ ಮತ್ತು ಏಕಮುಖ ಒತ್ತಡದ ಬಗೆಗಿನ ಚಿತ್ರಣ, ಕುಟುಂಬದೊಳಗಿನ ಹೆಣ್ಣಿನ ನೋವು ನಲಿವುಗಳ ಚಿತ್ರಣಗಳೊಂದಿಗೆ ಯಜಮಾನ ಸಂಸ್ಕೃತಿಯ ದೋಷಗಳು, ಉದ್ಯೋಗಸ್ಥ ಹೆಣ್ಣಿನ ಸ್ಥಿತಿಗತಿಗಳು ಇವೇ ಮೊದಲಾದ ಸಮಸ್ಯೆಗಳನ್ನು ವೈದೇಹಿಯವರ ಒಟ್ಟು ಕತೆಗಳಲ್ಲಿ ಕಾಣಬಹುದಾಗಿದೆ.

ಈ ಹಿನ್ನಲೆಯಲ್ಲಿ ವೈದೇಹಿಯವರ ಕತೆಗಳನ್ನು ಮುಖ್ಯವಾಗಿಸಿಕೊಂಡು ಪ್ರಮುಖವಾಗಿ ನಾಲ್ಕು ನೆಲೆಗಳಲ್ಲಿ ಚರ್ಚಿಸಿಕೊಳ್ಳಬಹುದಾಗಿದೆ:

೧. ಕುಟುಂಬದ ನೆಲೆ.

೨. ವ್ಯಕ್ತಿಗತ ನೆಲೆ.

೩. ಸಾಮಾಜಿಕ ನೆಲೆ.

೪. ಲಿಂಗರಾಜಕಾರಣದ ನೆಲೆ.

# ೧. ಕುಟುಂಬದ ನೆಲೆ

ಭಾರತೀಯ ಸಮಾಜದಲ್ಲಿ ಕುಟುಂಬವು ಒಂದು ಪ್ರಮುಖ ಅಧಿಕಾರ ಕೇಂದ್ರ. ಈ ಕೇಂದ್ರದ ಯಜಮಾನ ಪುರುಷನೇ ಆಗಿದ್ದನು. ಹೆಣ್ಣು ಈ ಸಂಸ್ಥೆಯಲ್ಲಿ ಎರಡನೇ ದರ್ಜೆಯವಳಾಗಿದ್ದಳು. ಪುರುಷ ಪ್ರಧಾನ ಸಮಾಜದ ಸಂಸ್ಕೃತಿಯ ಸಂಕೋಲೆಯೊಳಗೆ ಬಂಧಿತಳಾಗಿದ್ದಳು. ಈಕೆಯ ಜೀವನದ ಅರ್ಥವಂತಿಕೆಯನ್ನು ಸಾರ್ಥಕವನ್ನು ಅವಳ ಮಾತೃತ್ವದೊಂದಿಗೆ, ಲೈಂಗಿಕತೆ ಹಾಗೂ ಸಂತಾನೋತ್ಪತ್ತಿಯೊಂದಿಗೆ ಮಾತ್ರ ಸಮೀಕರಿಸಲಾಗಿತ್ತು ಮತ್ತು ಸೀಮಿತಗೊಳಿಸಲಾಗಿತ್ತು. ಆ ಮೂಲಕ ಪುರುಷ ಸಮಾಜ ಹೆಣ್ಣನ್ನು ನಿಯಂತ್ರಿಸುತ್ತಿತ್ತು, ಅಲ್ಲದೆ ಕುಟುಂಬ ಹಾಗೂ ವಿವಾಹ ಸಂಸ್ಥೆಗಳೂ ಸಹ ಸ್ತ್ರೀಯ ಲೈಂಗಿಕ ಬದುಕನ್ನು ನಿಯಂತ್ರಿಸುತ್ತಾ ಬಂದವು.

ಕುಟುಂಬವು ಪಿತೃಪ್ರಧಾನತೆಯನ್ನು ನೆಲೆಗೊಳಿಸಿದ ಮೂಲಭೂತ ಘಟಕವಾಗಿದೆ. ಪ್ರಾಚೀನ ಕಾಲದಿಂದಲೂ ಪುರುಷ ವ್ಯವಸ್ಥೆಯು ಭೂಮಿಯ ಮೇಲೆ ನಿಯಂತ್ರಣ ಹೊಂದಲು ಉತ್ಸಾಹ ಪಡುವಷ್ಟೇ ಸ್ತ್ರೀಯ ಮೇಲೂ ನಿಯಂತ್ರಣ ಸಾಧಿಸುತ್ತಾ ಬಂದಿತು. ಇಲ್ಲಿ ಭೂಮಿಯನ್ನು ಲಾಭದ ವಸ್ತುವಾಗಿ ನೋಡುತ್ತಾ ಬಂದಂತೆಯೇ ಹೆಣ್ಣನ್ನು ಒಂದು ಭೋಗದ ವಸ್ತುವಾಗಿ ಪರಿಗಣಿಸಿತ್ತು. ಆದ್ದರಿಂದ ಹೆಣ್ಣಿನ ಭಾವನೆ, ಕನಸುಗಳಿಗಿಂತ ಹೆಚ್ಚಾಗಿ ಹೆಣ್ಣಿನ ಸೌಂದರ್ಯ, ಕೆಲಸ ಮಾಡುವ ಸಾಮಾರ್ಥ್ಯವನ್ನೇ ಮುಖ್ಯವಾಗಿ ಪರಿಗಣಿಸುತ್ತಾ ಬಂದಿತು. ಈ ಕಾರಣವಾಗಿ ಸ್ತ್ರೀಯ ಮೇಲೆ ತನ್ನ ಒಡೆತನ ಸ್ಥಾಪಿಸಲು ಸಾದ್ಯವಾಯಿತು.

ಸ್ತ್ರೀಯ ದಾಸ್ಯ ಬಲಗೊಳ್ಳಲು ಸಮುದಾಯ ಹಾಗೂ ಕುಟುಂಬದ ಪಿತೃಪ್ರಧಾನತೆಯು ಪರಸ್ಪರ ಪೂರಕವಾಗಿ ವರ್ತಿಸತೊಡಗಿದವು. ಲಿಂಗಾಧರಿತ ಸಂಪ್ರದಾಯಗಳು, ವಿಧೇಯಕಗಳನ್ನು ರೂಪಿಸಿ ಅವುಗಳನ್ನು ಗಟ್ಟಿಗೊಳಿಸುವುದರೊಂದಿಗೆ ಅವು ಸ್ತ್ರೀಯರಲ್ಲಿಯೇ ಅಂತರ್ಗತಗೊಳ್ಳುವಂತೆ ಹುನ್ನಾರು ರೂಪಿಸಲಾಯಿತು. ಅದನ್ನು ಮೀರುವುದು ಅಪರಾಧವೆಂದು ವಿಧೇಯಕಗಳನ್ನು ರೂಪಿಸಲಾಯಿತು. ಮೀರಿದವರನ್ನು ಉಗ್ರವಾಗಿ ಶಿಕ್ಷಿಸಲಾಗುತ್ತಿತ್ತು. ಸಮಾಜವು ಎಲ್ಲ ರೀತಿಯಿಂದಲೂ ಅವಳನ್ನು ಹೊರಗಿಡುತ್ತ ದೈಹಿಕವಾಗಿ, ಮಾನಸಿಕವಾಗಿ ಹಿಂಸೆ ನೀಡುತ್ತ ಭಯವನ್ನು ಹುಟ್ಟುಹಾಕಿತು. ಹೆಣ್ಣು ನೀತಿ ನಿಯಮದ ಒಳಗಿನ ಬದುಕನ್ನು ಒಪ್ಪಿಕೊಂಡೇ ಬದುಕುವುದು ಇದರಿಂದ ಅನಿವಾರ್ಯವಾಯಿತು. ಆದ ಕಾರಣ ಕೌಟುಂಬಿಕ ವ್ಯಾಪ್ತಿಯಲ್ಲಿ ಸ್ತ್ರೀಯರು ಅಪಾರವಾದ ಹಿಂಸೆ,ದೌರ್ಜನ್ಯಗಳಿಗೆ ಒಳಗಾಗುತ್ತಲೇ ಬಂದರು.

ಕುಟುಂಬದೊಳಗಿನ ಲಿಂಗಾಧಾರಿತ ಶ್ರಮ ವಿಭಜನೆ ಮತ್ತು ಪಾತ್ರಗಳು ಸಾಮಾಜೀಕರಣಗೊಂಡು ಸ್ತ್ರೀಯರ ಸಹಾಯವನ್ನು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪಡೆದು ಪಿತೃಪ್ರಧಾನ ವ್ಯವಸ್ಥೆಯನ್ನು ಕಾರ್ಯಗತಗೊಳಿಸತೊಡಗಿತು. ಹೀಗೆ ಬಲಗೊಳ್ಳುತ್ತ ಹೋದ ಕುಟುಂಬದಲ್ಲಿ ಹೆಣ್ಣಿನ ಮನ್ನಣೆಯನ್ನು, ಸ್ತ್ರೀಯ ದಾಸ್ಯದ ಪ್ರಶ್ನೆಯನ್ನು ಮತ್ತಷ್ಟು ಸಾಂದ್ರಗೊಳಿಸುತ್ತಾ ಹೋಯಿತು. ಕುಟುಂಬದ ಅವಶ್ಯಕತೆಯೇ ಹೆಣ್ಣಾಗಿದ್ದಾಳೇ ಹೊರತು ಅನಿವಾರ್ಯವಾಗಿರಲಿಲ್ಲ. ಕೌಟುಂಬಿಕ ಜವಾಬ್ದಾರಿಯ ಹಿನ್ನಲೆಯಲ್ಲಿ ಏರ್ಪಟ್ಟ ಲಿಂಗಾಧಾರಿತ ಶ್ರಮವಿಭಜನೆ ಸ್ತ್ರೀಯ ಸಾರ್ವಜನಿಕ ಬದುಕಿನ ಕೊಂಡಿಗಳನ್ನು ಕಳಚಿದ್ದರಿಂದ ಸ್ತ್ರೀಯನ್ನು ಪುರುಷನ ಪರಿಪೂರ್ಣ ದಾಸಿಯಾಗಿ ಮಾರ್ಪಡಿಸಿತು. ಮನೆಯ ಒಳಗಿನ ಕೆಲಸವನ್ನು ಮಾತ್ರ ಹೆಣ್ಣು ಮಾಡಬೇಕು ಹೊರಗಿನ ಕೆಲಸಗಳೆಲ್ಲವೂ ಗಂಡಸಿನದ್ದು ಎಂದು ಹೇಳಿ ಸಾಮಾಜಿಕವಾಗಿ ಹೆಣ್ಣನ್ನು ಕುಟುಂಬ ವ್ಯವಸ್ಥೆ ನಿಯಂತ್ರಿಸಿತು.

ಸಾರ್ವಜನಿಕ ಬದುಕಿನಿಂದ ಹೊರದೂಡಲ್ಪಟ್ಟ ಸ್ತ್ರೀಯನ್ನು ಮರೆಮಾಡಿ ಅವಕಾಶ ವಂಚಿತ ದುರ್ಬಲಳಾದ ಸ್ತ್ರೀಗೆ ಸಾರ್ವಜನಿಕ ಬದುಕಿನ ಶೋಷಣೆಯಿಂದ ಕುಟುಂಬಗಳು ರಕ್ಷಣೆ ಒದಗಿಸುತ್ತವೆಂಬ ಮುಖವಾಡದೊಂದಿಗೆ ಸ್ತ್ರೀಯ ಮೇಲಿನ ಪುರುಷನ ಅಧಿಕಾರವನ್ನು ಅಧಿಕೃತಗೊಳಿಸಲಾಯಿತು. ಹೆಣ್ಣಿನ ಲೈಂಗಿಕತೆಯ ಮೇಲೆ ಅಧಿಕಾರ ಸ್ಥಾಪಿಸುವ, ಅದನ್ನು ದುರುಪಯೋಗ ಪಡಿಸುವ ಸಾಂಪ್ರದಾಯಿಕ ವಿವಾಹ ಪದ್ಧತಿಯನ್ನು ಜಾರಿಗೊಳಿಸಲಾಯಿತು. ಸ್ವಾತಂತ್ರ್ಯ ನಂತರದ ಸಂದರ್ಭದಲ್ಲಿ ಕಾಲ ಬದಲಾದಂತೆ ಸ್ತ್ರೀ ಬಗ್ಗೆ ಕಾಳಜಿಯನ್ನು ತೋರುವ ಸ್ತ್ರೀ ಸಮಾನತೆಯನ್ನು ಒಪ್ಪಿಕೊಂಡ ನಗರಕೇಂದ್ರಿತ ಕುಟುಂಬ ವ್ಯವಸ್ಥೆಗಳು ರೂಪಿತಗೊಂಡವು. ಸ್ತ್ರೀ–ಪುರುಷರ ಸಾಂಪ್ರದಾಯಿಕ ವಿವಾಹ ಪದ್ಧತಿಯನ್ನು ಮುರಿಯುವುದರ ಮೂಲಕ **'ಆತ್ಮಗೌರವದ'** ವಿವಾಹ ವ್ಯವಸ್ಥೆ ಜಾರಿಗೆ ಬಂದವು. ಗಂಡು–ಹೆಣ್ಣುಗಳ ಪರಸ್ಪರ ಆಲೋಚನೆಗಳನ್ನು, ಅಗತ್ಯಗಳನ್ನು ಗೌರವಿಸುವ, ಕಾಳಜಿ ತೋರುವ ದೃಷ್ಟಿಯಲ್ಲಿ ಪ್ರೇಮ ವಿವಾಹಗಳನ್ನು ಅಂಗೀಕರಿಸಲಾಯಿತು. ಆದರೂ ಅದನ್ನು ತಮ್ಮ ಸಂಪ್ರದಾಯಕ್ಕೆ ತಕ್ಕ ಹಾಗೆ ಬದಲಾವಣೆ ಮಾಡಿಕೊಳ್ಳಲಾಯಿತು. ಇಲ್ಲಿಯೂ ವಿವಾಹ ನಂತರದ ಕುಟುಂಬ ವ್ಯವಸ್ಥೆಯು ಪಿತೃ ಪ್ರಧಾನತೆಯ ಅಡಿಯಲ್ಲಿಯೇ ಸ್ತ್ರೀ ಪುರುಷ ಪಾತ್ರಗಳು ಸಾಂಪ್ರದಾಯಿಕವಾಗಿಯೇ ಮುಂದುವರಿಯುವಂತೆ ನೋಡಿಕೊಳ್ಳಲಾಯಿತು. ಬದಲಾವಣೆಯ ನೆಪದಲ್ಲಿ ಹೊಸ ನಿಯಮಗಳನ್ನು ರೂಪಿಸಲಾಯಿತು.

ಕನ್ನಡದ ಪ್ರಮುಖ ಕತೆಗಾರ್ತಿ ವೈದೇಹಿಯವರ ಕತೆಗಳು ಈ ಹಿನ್ನೆಲೆಯಲ್ಲಿ ಮಧ್ಯಮ ವರ್ಗದಿಂದ ಕೆಳವರ್ಗದ ಅಲ್ಪಸಂಖ್ಯಾತ ಸ್ತ್ರೀಯರ ವಿವಿಧ ಸಂವೇದನೆಗಳನ್ನು ಲಿಂಗತಾರತಮ್ಯದ ವಿವಿಧ ಬಗೆಗಳನ್ನು ಹಿಡಿದಿಡುವ, ಪ್ರಯತ್ನ ಮಾಡುತ್ತದೆ. ಇಲ್ಲಿ ಎರಡು ರೀತಿಯಲ್ಲಿ ಮಹಿಳೆಯರ ಸಮಸ್ಯೆ, ತುಡಿತ ವ್ಯಕ್ತವಾಗಿರುವುದನ್ನು ಕಾಣಬಹುದಾಗಿದೆ.

* ಕೌಟುಂಬಿಕ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿದ ಮಹಿಳೆಯರು.
* ಕೌಟುಂಬಿಕ ಮೌಲ್ಯಗಳ ಕುಸಿತವನ್ನು ಪ್ರಶ್ನಿಸುವ ದಿಟ್ಟೆಯರು.

**'ಶೋಧ'** ಕತೆಯಲ್ಲಿ ಕೌಟುಂಬಿಕ ಸಮಸ್ಯೆಯಲ್ಲಿ ಸಿಲುಕಿದ ಮಹಿಳೆ ಯಾವ ರೀತಿ ತನ್ನ ಅಸ್ತಿತ್ವವನ್ನೇ ಕಳೆದುಕೊಂಡು ಯಾಂತ್ರಿಕತೆಯನ್ನು ಮೀರಲಾರದೆ ತೊಳಲಾಡುತ್ತಾಳೆ ಎಂಬುದರ ಚಿತ್ರಣವಿದೆ. ಕತೆಯ ನಾಯಕಿ ಭಾರತಿ ತಾನು ಮನೆಯೊಳಗಿನ ದೈನಂದಿನ ಯಾಂತ್ರಿಕತೆಯಲ್ಲಿ ಕಳೆದುಕೊಂಡ ವೈಯಕ್ತಿಕತೆ, ವೈಶಿಷ್ಟ್ಯಗಳ ಹುಡುಕಾಟ ಮಾಡುವುದರಲ್ಲೇ ಮಾನಸಿಕ ಸ್ಥಿಮಿತತೆಯನ್ನು ಕಳೆದುಕೊಳ್ಳುತ್ತಾಳೆ. ತನ್ನೊಳಗೆ ನಡೆಯುವ ಭಾವನಾತ್ಮಕ ಸಂಘರ್ಷವನ್ನು, ತೊಳಲಾಟವನ್ನು ಯಾರಿಗೂ ಹೇಳಿಕೊಳ್ಳದೆ ಬದುಕಿಗೆ ಅತ್ಯವಶ್ಯಕವಾದ ಬಾಹ್ಯ ವಸ್ತುಗಳೆಲ್ಲ ಇದ್ದರೂ ಸುಖವಾಗಿ ಬದುಕಲಾರದೆ ಹೋಗುತ್ತಾಳೆ. ಇಲ್ಲಿ ಕುಟುಂಬದ ಒಳಗಿನ ಹೆಣ್ಣಿನ ಒತ್ತಡ ನೋವುಗಳ ಚಿತ್ರಣದೊಂದಿಗೆ ಅದನ್ನು ಮೀರಲಾಗದೆ ಅದರೊಳಗೆ ಮುಳುಗಿಹೋಗಿ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುವುದನ್ನು ಕಾಣಬಹುದಾಗಿದೆ. ಹೀಗೆ ಹೆಣ್ಣಿನ ಲೈಂಗಿಕತೆ–ವಿವಾಹಗಳಿಗೆ ಸಂಬಂಧಿಸಿದಂತೆ ಸಮಾಜ ರಚನೆಯು ಅಳವಡಿಸಿಕೊಳ್ಳುತ್ತಾ ಬಂದಿರುವ ವಿವಿಧ ಪದರಗಳು, ಹಲವು ವಿರೋಧಾಭಾಸಗಳನ್ನು ಈ ಕತೆ ಹೇಳುತ್ತದೆ.

**'ಚಿಪ್ಪು'** ಕತೆಯ ನಾಯಕಿ ಯಶಿ. ಇವಳಿಗೆ ಅಪ್ಪ ವರ ಹುಡುಕುತ್ತಿದ್ದಾರೆ, ತುಂಬಾ ಇದ್ದವನನ್ನು ಹಿಡಿದು ಅವನಿಗೆ ಮಗಳನ್ನು ಕೊಡಬೇಕೆಂಬ ಆಸೆ ಅಪ್ಪನಿಗೆ, ಅವನು ನೋಡಲೂ ಚೆಂದವಿರಬೇಕು, "ಏಕೆಂದರೆ ಅವರ

ಮಗಳ ಗಂಡನಾಗುವವ ಚೆಂದವಿರಲೇಬೇಕಂತೆ"[೧] ಇದು ಅವಳ ಅಪ್ಪನ ಮಾತ್ರವಲ್ಲ ಕುಟುಂಬದವರೆಲ್ಲರ ಬಯಕೆ. ಆದರೆ ಯಶಿಯ ಭಾವ ವರ್ತುಲವೇ ಬೇರೆಯದು. ಅವಳು ಉಕ್ಕುವ ಬಯಕೆಗಳಿಂದ ತನಗೇ ತಿಳಿಯದಂತೆ ತಗ್ಗುತ್ತಾಳೆ. ಕೌಟುಂಬಿಕ ಪರಿಸರವು ಸಂಪ್ರದಾಯಕ್ಕೆ ತಕ್ಕಂತೆ ಅವಳ ಭಾವನೆಗಳನ್ನು, ನಡವಳಿಕೆಯನ್ನು ಹತ್ತಿಕ್ಕುವ ಪ್ರಯತ್ನ ಮಾಡುತ್ತದೆ. ರಂಗಜ್ಜಿಯು "ಅವಳಷ್ಟು ಪಾಪದ ಹುಡುಗಿ ಸಿಗಲಿಕ್ಕಿಲ್ಲ, ಹಿರಿಯರು ಏನು ಹೇಳಿದರೂ ಹೂಂ ಎನ್ನುವವಳು"[೨] ಎಂದು ಹೊಗಳಿ ಹೊಗಳಿ ಅವಳ ವ್ಯಕ್ತಿತ್ವವನ್ನು ಒಳ್ಳೆಯವಳೆಂಬಂತೆ ರೂಪಿಸಲು ಪ್ರಯತ್ನಿಸುತ್ತಾಳೆ. ತನ್ನನ್ನು ತೆರೆದುಕೊಳ್ಳಲು ಯಶೀಗೆ ಅವಕಾಶವೇ ಸಿಗುವುದಿಲ್ಲ. ಅಭಿವ್ಯಕ್ತಿಸುವ ಸ್ವತಂತ್ರ್ಯವೇ ಇಲ್ಲದ ಹಾಗೆ ಸಂಪ್ರದಾಯ ಅವಳನ್ನು ಹಿಡಿತದಲ್ಲಿಡುತ್ತದೆ. ಒಮ್ಮೆ ತನ್ನ ಮನಸ್ಸನ್ನು ಅಮ್ಮನೊಂದಿಗೆ ಬಿಚ್ಚಿಡುವ ಪ್ರಯತ್ನ ಮಾಡಿದರೂ "ನಾನು ಹೀಗೆ ಹೇಳಿದೆನಂತ ಅಪ್ಪನೊಡನೆ ಹೇಳಿಬಿಡಬೇಡ ಮತ್ತೆ."[೩] ಎಂದು ಆಮೇಲೆ, ಹೀಗೆ ಸೇರಿಸಿದ್ದಕ್ಕೆ ಕಸಿವಿಸಿಗೊಳ್ಳುತ್ತಾಳೆ. ಇಷ್ಟಕ್ಕೂ ಮದುವೆ ನಿಜಕ್ಕೂ ತನಗೆ ಬೇಕೆ? ಎಂಬ ಪ್ರಶ್ನೆ ಆಕೆಯಲ್ಲಿ ಉಂಟಾಗುತ್ತದೆ. ಇಂಥ ಹೆಣ್ಣಿನ ಮೂಕ ಆತಂಕ, ದ್ವಂದ್ವಗಳಿಗೆ ಅಭಿವ್ಯಕ್ತಿ ಎಂಬಂತೆ ವೈದೇಹಿಯವರ ಕತೆಗಳು ಸಾಕ್ಷಿಯಾಗಿವೆ. ಕುಟುಂಬದ ಹಿಡಿತದೊಳಗೆ ಸಿಲುಕಿದ ಹೆಣ್ಣು ಅದನ್ನು ಎದುರಿಸಲಾಗದೆ, ಮೀರಲೂ ಆಗದೆ, ತನ್ನ ಚಹರೆಯನ್ನು ಗುರುತಿಸಿಕೊಳ್ಳಲಾಗದೆ, ತೊಳಲಾಡುವ ಹೆಣ್ಣಿನ ಕೌಟುಂಬಿಕ ಜಗತ್ತಿನ ಚಿತ್ರಣವಿರುವುದನ್ನು ಅವರ ಕತೆಗಳಲ್ಲಿ ಕಾಣಬಹುದಾಗಿದೆ.

ಯಶಿ ತನ್ನ ಮದುವೆ ಬಗ್ಗೆ ಯೋಚಿಸುತ್ತಿದ್ದಂತೆ ಕೆಟ್ಟ ಕನಸ್ಸನ್ನು ಕಾಣುತ್ತಾಳೆ. ಬೆಚ್ಚಿ ಎದ್ದವಳಿಗೆ ತನ್ನ ಗೆಳತಿಯಾದ ವಿಚ್ಛೇದನ ಪಡೆದುಕೊಂಡು ಗಂಡನಿಂದ ಬೇರೆಯಾಗಿ ಬದುಕುತ್ತಿರುವ ಉಷೆಯ ನೆನಪಾಗುತ್ತದೆ. ಉಷೆಯ ಮಾತುಗಳು ತನ್ನೊಳಗೆ ಎಚ್ಚರವನ್ನುಂಟು ಮಾಡಲು ಬಂದ ಹಾಗೆ ಅನಿಸುತ್ತದೆ. ಉಷೆ ಹೀಗೆ ಹೇಳುತ್ತಾಳೆ. ‘‘ನೋಡು ಯಶೀ, ನಮಗೆ ಇಂತಹ ಜೀವನ ಸರಿ ಎನ್ನಲು ನಾಲಗೆ ಏಳುವ ಮುನ್ನವೇ ನಮ್ಮ ಮದುವೆಯಾಗುತ್ತದೆ’’[೪] ಇಲ್ಲಿ ಉಷೆಯ ಅಭಿಪ್ರಾಯ ಆವಳೊಬ್ಬಳದ್ದೆ ಮಾತ್ರವಲ್ಲ ಎಲ್ಲ ಹೆಣ್ಣು ಮಕ್ಕಳ ಧ್ವನಿಯಾಗಿರುವ ಹಾಗೆ ತೋರುತ್ತದೆ. ಅವಳಿಗಾದ ಅನುಭವ ಅವಳನ್ನು ಹೀಗೆ ಮಾತನಾಡುವ ಹಾಗೆ ಮಾಡುತ್ತದೆ. ಕುಟುಂಬವು ವಿವಾಹ ವಿಚಾರವಾಗಿ ಎಷ್ಟೆಲ್ಲ, ಅಧಿಕಾರವನ್ನು ಪಡೆದು ಹೆಣ್ಣನ್ನು ನಿಯಂತ್ರಿಸಿ ತನ್ನದನ್ನೆಲ್ಲ ಹೇರುತ್ತದೆ. ಹೆಣ್ಣಿನ ಅಭಿಪ್ರಾಯಗಳನ್ನು ಲೆಕ್ಕಿಸದೇ ಅವಳನ್ನು ಹೇಗೆ ನಿಷ್ಕ್ರಿಯಗೊಳಿಸಲು ಪ್ರಯತ್ನಿಸುತ್ತದೆ ಎಂಬುದರ ಚಿತ್ರಣವನ್ನು ಈ ಕತೆ ಒಳಗೊಂಡಿದೆ.

ಕುಟುಂಬವು ಹೆಣ್ಣನ್ನು ಸಾಕುವುದು ಅವಳನ್ನು ಮದುವೆ ಮಾಡುವುದು ತನ್ನ ಜವಾಬ್ದಾರಿ ಎಂದುಕೊಂಡು ಅದರ ಮೇಲೆ ಹೆಣ್ಣು ಅಧಿಕಾರ ಹೊಂದದ ಹಾಗೆ ಕೆಲಸ ನಿರ್ವಹಿಸುತ್ತದೆ. ಮದುವೆಯಾದ ನಂತರ ಬರುವ ಹಲವಾರು ಸಮಸ್ಯೆಗಳಿಗೆ ತಾವು ಜವಾಬ್ದಾರರಲ್ಲ ಹೆಣ್ಣೆ ಹೊಣೆ ಅವಳೇ ಅದನ್ನೆಲ್ಲ ಪರಿಹರಿಸಿಕೊಳ್ಳಬೇಕು ಎನ್ನುತ್ತದೆ. ಈ ಧೋರಣೆಯನ್ನು ಉಷೆ ಈ ರೀತಿ ಪ್ರಶ್ನಿಸುತ್ತಾಳೆ . ‘‘ಹಾಗಾದರೆ ಮದುವೆ ವಿಷಯದಲ್ಲಿ ಮಾತ್ರ ನಮ್ಮ ಬುದ್ಧಿ, ನಮ್ಮ ವಯಸ್ಸು ಮಾರ್ಗದರ್ಶನವಾಗಲಾರದೆ ?’’[೫]

ಕಾಲ ಬದಲಾದ ಹಾಗೆ ಅಭಿಪ್ರಾಯಗಳು, ಆಲೋಚನೆಗಳು ಬದಲಾಗುತ್ತವೆ. ಸಮಾಜದ ಬದಲಾವಣೆಯೊಂದಿಗೆ ಕುಟುಂಬವು ಬದಲಾಗುತ್ತದೆ ಎಂಬುದು ಹೆಣ್ಣಿನ ವಿಚಾರದಲ್ಲಿ ಸತ್ಯವಾದಂತೆ

ತೋರುವುದಿಲ್ಲ. ಹೆಣ್ಣಿನ ಸಮಸ್ಯೆಗಳು ಏನೇ ಇದ್ದರು ಅವುಗಳು ಪೂರ್ಣ ಪರಿಹಾರವನ್ನು ಪಡೆದುಕೊಳ್ಳಲು ವ್ಯವಸ್ಥೆ ಅನುವು ಮಾಡಿಕೊಟ್ಟಿಲ್ಲ. ಆಧುನಿಕತೆ ಪ್ರವೇಶಿಸಿದಂತೆ ಸಮಸ್ಯೆಗಳು ಹೊಸ ರೂಪವನ್ನು ಪಡೆದು ಕೊಂಡು ಮತ್ತೆ ಹೆಣ್ಣಿನ ಶೋಷಣೆ ಮುಂದುವರಿಯುತ್ತಲೇ ಇದೆ.

"ವರ್ತುಲ ಕತೆ" ಯಲ್ಲಿ ನಾಯಕಿಯು ಸಂಸಾರದ ಜಂಜಡಗಳ ನಡುವೆ, ಕುಟುಂಬದ ಒತ್ತಡದಿಂದಾಗಿ ಮಾನಸಿಕ ಹಿಂಸೆಯನ್ನು ಅನುಭವಿಸುತ್ತಾಳೆ. ಕತೆಯ ಶೀರ್ಷಿಕೆಯೇ ವರ್ತುಲ ಎಂದಿರುವುದು ಇಲ್ಲಿ ಕುಟುಂಬವು ಒಂದು ವೃತ್ತಾಕಾರವಾದ ಸಂಸ್ಥೆಯೆಂಬುದನ್ನು ಸೂಚಿಸುತ್ತದೆ. ಆ ವರ್ತುಲದೊಳಗೆ ಕೆಲವೊಮ್ಮೆ ಹೆಣ್ಣು ಬಂಧಿಯಾಗುತ್ತಾಳೆ. ಮಾನಸಿಕವಾಗಿ, ದೈಹಿಕವಾಗಿ ಹಿಂಸೆ ಅನುಭವಿಸುತ್ತಾಳೆ ಎಂಬುದನ್ನು ಲೇಖಕಿ ಗುರುತಿಸಿದ್ದಾರೆ. ಕುಟುಂಬದ ವ್ಯವಸ್ಥೆ ಹೆಣ್ಣಿನ ವ್ಯಕ್ತಿತ್ವವನ್ನು ತನಗೆ ಬೇಕಾದ ರೀತಿಯಲ್ಲಿ ರೂಪಿಸಿಕೊಳ್ಳುತ್ತದೆ ಮತ್ತು ನಿಯಂತ್ರಿಸುತ್ತದೆ.

ಈ ಕತೆಯ ಮುಖ್ಯ ಪಾತ್ರವಾದ ಕುಸುಮ ತನ್ನ ಸ್ಥಿತಿಯ ಬಗ್ಗೆ "ತಾನು ಮದುವೆಯಾದ ವರ್ಷವೇ ಅಪ್ಪರವರೆಗೆ ಮನೆ, ವ್ಯವಸಾಯ ಅಂತ ನೆಪ ಮಾತ್ರಕ್ಕೆ ಕುಳಿತು ಕೆಲಸಕ್ಕೆ ಸೇರಲು ತುದಿಗಾಲಿನಲ್ಲಿ ನಿಂತಿದ್ದ ಗಂಡ ಕೆಲಸ ಸಿಕ್ಕಿ ತುಂಬಿದ ಕುಟುಂಬದಿಂದ ಹೊರಬಂದಿದ್ದರು ಇದು ಆಗಿದ್ದು ನನ್ನಿಂದಲೇ ಎಂಬ ಕಿಚ್ಚು ಮನೆಯಲ್ಲಿ ಹಬ್ಬಿತ್ತು. ಇದರ ಪೆಟ್ಟಿನಿಂದ ದಿನ ದಿನ ಕುಗ್ಗುತ್ತಿದ್ದ ಮನಸ್ಸು ಈಗ ಸಂಪೂರ್ಣ ಮುರುಟಿ ಹೋಗಿದೆ."[5] ಎಂದು ಅಂದುಕೊಳ್ಳುತ್ತಾಳೆ.

ಕುಸುಮಾಳ ಅತ್ತೆ ಎಲ್ಲದಕ್ಕೂ ಅವಳನ್ನು ದೂರುತ್ತಾರೆ. ತನ್ನ ಮಗ ಮನೆ ಬಿಟ್ಟು ಬೇರೆ ಮನೆ ಮಾಡಲು ಇವಳೇ ಕಾರಣವೆನ್ನುತ್ತಾಳೆ. ಕುಸುಮಾಳ ಬಗ್ಗೆ ಈ ರೀತಿಯ ಧೋರಣೆಯನ್ನು ತಳೆದಿದ್ದ ಅವಳು ತನ್ನ ಮಗಳಾದ ರೇಖಾಳ ಬಗ್ಗೆಯೇ ಬೇರೊಂದು ನಿಲುವನ್ನು ತಳೆದಿರುತ್ತಾಳೆ. ಕುಸುಮ ಆದರೆ ತುಂಬಿದ ಕುಟುಂಬವಿದ್ದರು, ಮನೆ ಹೇಗೆ ಇದ್ದರು ಅದಕ್ಕೆ ಹೊಂದಿಕೊಂಡು ಬದುಕುಬೇಕು ಅದೇ ತನ್ನ ಮಗಳಾದ ರೇಖಾಳಿಗೆ ಹೊಂದಾಣಿಕೆಯ ಅವಶ್ಯಕತೆ ಇಲ್ಲ ಎನ್ನುತ್ತಾಳೆ.

ಕುಸುಮಾ ಯಾವತ್ತು ತನ್ನ ಕುಟುಂಬದ ಬಗ್ಗೆ ಆಲೋಚಿಸುತ್ತಾಳೆ. ತನ್ನ ಅತ್ತೆಗೆ ನೋವಾಗಿದೆ ಎಂದು ಬೇಸರಪಡುತ್ತಾಳೆ. ಅತ್ತೆಯ ಆಸೆಯಂತೆ ಗಂಡನನ್ನು ಕೆಲಸ ಬಿಡಿಸಿ ಊರಿಗೆ ಹೋಗಬೇಕೆಂದು ನಿರ್ಧರಿಸುತ್ತಾಳೆ. ಆದರೆ ಅವಳ ಗಂಡ ಅದಕ್ಕೆ ಒಪ್ಪುವುದಿಲ್ಲ. ಇಲ್ಲಿ " ಎಷ್ಟು ಬಾರಿ ಹೇಳಲಿ ನಿನಗೆ ರೂಮಿನ ಕಿಟಕಿ ತೆರೆದಿಡಬೇಡವೆಂತ? ಮತ್ತೆ ಮತ್ತೆ ತೆರೆದೇ ಇಡುತೀಯಲ್ಲ "[6]ಎಂದು ಗದರಿಸುತ್ತಾನೆ. ಇಲ್ಲಿ ಕುಸುಮಳ ಎಲ್ಲ ಭಾವನೆಗಳಿಗೂ ಸ್ಪಂದಿಸುವ, ಎಲ್ಲವನ್ನು ಸ್ವೀಕರಿಸಿ ಕೊರಗುವ ಮನಸ್ಥಿತಿಯನ್ನು ಕಿಟಕಿಯ ಸಂಕೇತದೊಂದಿಗೆ ಚಿತ್ರಿಸಿದ್ದಾರೆ. ತನ್ನ ರೂಮಿನ ಕಿಟಕಿಯನ್ನು ಯಾವಗಲೂ ತೆರೆದಿಡ ಬಯಸುವ ಅವಳು ತನ್ನ ಬದುಕಿನ ಸಂದರ್ಭ ಸನ್ನಿವೇಶಗಳನ್ನು ತೆರದ ಮನಸ್ಸಿನಿಂದ ಸ್ವೀಕರಿಸ ಬಯಸುತ್ತಾಳೆ. ಆದರೆ ಅದರಿಂದಾಗುವ ಅಪಾಯಗಳನ್ನು ಅರಿತ ಅವಳ ಗಂಡ ಕುಸುಮಾಳ ಮನಸ್ಸಿನ ನೋವನ್ನು ತಿಳಿದು " ಕುಸುಮಾ ಸತ್ಯ ಹೇಳು ಮುಖ ಯಾಕೆ ಹೀಗಿದೆ? ನನಗೆಲ್ಲ ತಿಳಿಯಿತು ಮನಸ್ಸಿನ ತುಂಬಾ ಗಾಯಗಳಲ್ಲವೆ? ನಾನಂದಂತೆ ಮಾಡಲು ನಿನಗೆ ಸಾಧ್ಯವೇ ಇಲ್ಲವೇ? ಬೇಡದ್ದಕ್ಕೆ ಮನಸ್ಸಿನ ಬಾಗಿಲನ್ನು ಹಾಕಿಯೇ ಬಿಡಲು ನಿನ್ನಿಂದ ಅಸಾಧ್ಯವೇ? ಅದರಿಂದ ನಿನಗೇ ನೆಮ್ಮದಿಯಾಗುವುದಲ್ಲ, ಯೋಚಿಸು"[7] ಎಂದು ಹೇಳುತ್ತಾನೆ.

ಈ ಕತೆಯಲ್ಲಿ ಕುಟುಂಬದ ನಿಯಂತ್ರಣವನ್ನು ಹೆಣ್ಣು ತಾನೇ ಮೀರಬೇಕು ಎನ್ನುವ ಆಶಯವಿದೆ. ಹೆಣ್ಣಿನ ಬದುಕಿನ ಕ್ರಮದ ಬದಲಾವಣೆಗೆ ಅವಳೇ ಪ್ರಯತ್ನಿಸಬೇಕು. ಎಲ್ಲವನ್ನು ಮುಕ್ತ ಮನಸ್ಸಿನಿಂದ ಸ್ವೀಕರಿಸುವುದರ ಜೊತೆಗೆ ತನಗೆ ಬೇಡವಾದ ಸಂಗತಿಗಳನ್ನು ಬಿಟ್ಟು ಅವುಗಳ ಬಗ್ಗೆ ಯೋಚಿಸದೇ ಬದುಕನ್ನು ನಡೆಸಬೇಕು ಅದರಿಂದ ಅವಳ ಹಲವಾರು ಸಮಸ್ಯೆಗಳಿಗೆ ಪರಿಹಾರ ದೊರೆಯುತ್ತದೆ ಎಂಬುದು ಲೇಖಕಿಯ ನಿಲುವಾಗಿದೆ.

ಇಂಥ ಪಿತೃ ಪ್ರಧಾನ ಕೌಟುಂಬಿಕ ವ್ಯವಸ್ಥೆಯಲ್ಲಿ ಹೆಣ್ಣು ಬಾಳಲೇಬೇಕಾದ ಅನಿವಾರ್ಯತೆಯನ್ನು ಕುರಿತು ಡಾ. ಎಚ್. ಶ್ರೀಮತಿಯವರು ಹೀಗೆ ಅಭಿಪ್ರಾಯಿಸುತ್ತಾರೆ:

"ಸ್ತ್ರೀ ಪುರುಷರು ಒಟ್ಟಿಗೆ ಬಾಳಬೇಕಾದ **'ಕುಟುಂಬ'** ಎಂಬ ವ್ಯವಸ್ಥೆ, ಅದನ್ನು ಪುರುಷ ನಿರ್ಮಿತ ರಚನೆ ಎಂದು ಎಷ್ಟೇ ವಿವರಿಸಿದರೂ, ಉಳಿದ ರಚನೆಗಳಿಂದ ಭಿನ್ನ, ಇಲ್ಲಿ ರಕ್ತ ಸಂಬಂಧಗಳಿವೆ, ಇವು ಪ್ರಕೃತಿ ಸಹಜ ಸಂಬಂಧಗಳಾದ್ದರಿಂದ ಇಲ್ಲಿ ಮನೋಲೋಕ ಎಂಬುದಿದೆ. ಮನಸ್ಸಿನ ಮಾತಿಗೆ ಬಂದರೆ ಸ್ತ್ರೀ ಪುರುಷರಲ್ಲಿ ಕೆಲವು ಸಹಜ ಭಿನ್ನತೆಗಳಿವೆ. ಹಲವು ವೇಳೆ ಇವು ಸಾಮರ್ಥ್ಯಗಳಾಗಿ ನಿಂತರೆ, ಮತ್ತೆ ಕೆಲವು ವೇಳೆ ದೌರ್ಬಲ್ಯಗಳಾಗಿ ಉಳಿಯುತ್ತವೆ. ಬಹುಶಃ ಪ್ರಕೃತಿಯು ಸ್ತ್ರೀಗೆ ತಾಯ್ತನದ ಹೊಣೆಗಾರಿಕೆಯನ್ನು ವಹಿಸಿರುವ ಸಂಗತಿಯಿಂದಾಗಿಯೇ ರಕ್ತ ಸಂಬಂಧಗಳ ವಿಚಾರದಲ್ಲಿ ಅವಳನ್ನು ಹೆಚ್ಚು ಮೆದುವಾಗಿಸಿದೆ. ತನ್ನ ಅನುಕೂಲಗಳ ಕಡೆಯೇ ಗಮನವಿಟ್ಟು ಸಾಧಕನಾಗುವುದು ಪುರುಷನಿಗೆ ಸಾಧ್ಯವಾದಂತೆ ಸ್ತ್ರೀಗೆ ಸಾಧ್ಯವಾಗಲಿಲ್ಲವೆಂಬುದಕ್ಕೆ ಈ ಗುಣ ಕಾರಣವೇನೋ"[4] ಎನ್ನುತ್ತಾರೆ.

ವೈದೇಹಿಯವರ ಕತೆಗಳಲ್ಲಿ, 'ಮದುವೆ' ಎಂಬ ಸಾಮಾಜಿಕ ಚೌಕಟ್ಟಿನಲ್ಲಿ, ಪಿತೃಪ್ರಧಾನ ವ್ಯವಸ್ಥೆಯು, ಆರ್ಥಿಕ ಅಧಿಕಾರ ಹಾಗೂ ಒಡೆತನವನ್ನು ಸ್ತ್ರೀಯರ ಮೇಲೆ ಚಲಾಯಿಸಲು ರೂಪಿಸಿರುವ ಹಲವು ತಂತ್ರಗಳನ್ನು ಕಾಣಬಹುದಾಗಿದೆ. ಈ ಪುರುಷ ತಂತ್ರಗಳ ಮೂಲದಲ್ಲಿ ಪುರುಷರೂಪಿ ಕೌಟುಂಬಿಕ ಅಧಿಕಾರದಿಂದ ಸ್ತ್ರೀಯು ಮುಕ್ತಳಾಗಬೇಕು ಎಂಬ ಪರ–ವಿರೋಧ ರೀತಿಯ ಸಂಘರ್ಷಣೆಗಳಿರುವುದನ್ನು ಇವರ ಕತೆಗಳಲ್ಲಿ ಗುರುತಿಸಬಹುದಾಗಿದೆ.

**'ಮದುವೆ ಹೆಣ್ಣು ಸೀರೆ'** ಎಂಬ ಕತೆಯ ನಾಯಕಿ ಸುಮ, ಅವಳ ದೊಡ್ಡಪ್ಪನ ಮಗನ ಮದುವೆಗೆಂದು ಹೊಸ ಸೀರೆಯೊಂದನ್ನು ಕೊಳ್ಳುತ್ತಾಳೆ. ಅದರ ಸಂಭ್ರಮದಿಂದಲೇ ಮದುವೆಗೆ ಹೋಗುತ್ತಾಳೆ. ಆದರೆ ಅಲ್ಲಿ ತನ್ನ ಸೀರೆಯನ್ನು ನೋಡಿ ಯಾರು ಮೆಚ್ಚುಗೆ ಸೂಚಿಸದೆ ಇದ್ದುದನ್ನು ಕಂಡು ನಿರಾಶೆಯ ಒತ್ತಡದೊಂದಿಗೆ ಮನೆಗೆ ಮರಳುತ್ತಾಳೆ. ಇಲ್ಲಿ ಹೆಣ್ಣಿನ ಸೂಕ್ಷ್ಮ ಮನಸ್ಥಿತಿಯ ಚಿತ್ರಣವನ್ನು ಕಾಣಬಹುದಾಗಿದೆ. ತಾನಾಗೇ ಆರಿಸಿ ತಂದ ಸೀರೆಯನ್ನು ಎಲ್ಲರು ಮೆಚ್ಚಲಿ, ಅದರಿಂದ ತಾನು ಸಂತೋಷ ಪಡಬಹುದೆಂಬ ಆಸೆ ಅವಳದಾಗಿದೆ. ಹೆಚ್ಚೇನು ವಿಶೇಷವಲ್ಲದ, ಸಾಮಾನ್ಯವಾದ ಉಡುಗೆಯಲ್ಲಿ, ಊಟದಲ್ಲಿ ಹೆಚ್ಚಿನ ಸಂತೋಷಪಡುವ ಹೆಣ್ಣಿನ ಸೂಕ್ಷ್ಮ ಮನಸ್ಸಿನ ಸಂಕೀರ್ಣತೆಯನ್ನು ಗಮನಿಸಬಹುದಾಗಿದೆ.

**'ನಮ್ಮ ಶಾಂತಿಯ ಬಯಕೆ'** ಎಂಬ ಕತೆಯಲ್ಲಿ ಶಾಂತಿಯು ಮದುವೆಯ ಮೊದಲು ಮಕ್ಕಳನ್ನು ಹಡೆಯುವ ಬಗ್ಗೆ ವಿಶೇಷ ಕಲ್ಪನೆಯನ್ನು ಇರಿಸಿಕೊಂಡಿರುತ್ತಾಳೆ ಮದುವೆಯಾದ ನಂತರ ಎರಡು ಮಕ್ಕಳಾದಾಗಲೇ ತನಗೆ ಮಕ್ಕಳು ಸಾಕು ಎನ್ನುತ್ತಾಳೆ. ಹನ್ನೆರಡು ಮಕ್ಕಳನ್ನು ಹಡೆಯಬೇಕು ಎಂಬ ಆಸೆ, ಕಲ್ಪನೆ ಎಲ್ಲವೂ ಕಮರಿಹೋಗುತ್ತವೆ.

**'ಪ್ರಶ್ನೋತ್ತರಗಳ ಆಚೆ'** ಕತೆಯಲ್ಲಿ ಒಂದು ಹುಡುಗ ಒಂದು ಹುಡುಗಿಯನ್ನು ಬಸ್ಸತ್ತಿಸಲು ಬಂದಿರುತ್ತಾನೆ. ಬಸ್ಸು ಹತ್ತಿದ ತಕ್ಷಣ ಹುಡುಗಿ ಅಳಲಾರಂಭಿಸುತ್ತಾಳೆ. ಅವಳ ಪಕ್ಕದಲ್ಲಿ ಕುಳಿತ ಕತೆಯ ನಾಯಕಿ ಆ ಹುಡುಗಿಯನ್ನು ಏಕೆ ಅಳುವೆ? ಎಂದು ಕೇಳಬೇಕು ಎಂದೆನಿಸುತ್ತದೆ. ಆ ಹುಡುಗಿಯ ನೆಪದಲ್ಲಿ ತನ್ನೊಳಗೆ ನಡೆಯುವ ಭಾವನೆಗಳ ಸಂಘರ್ಷವನ್ನು ಹತ್ತಿಕ್ಕಲಾಗದೆ ಚಡಪಡಿಸುತ್ತಾಳೆ. ಕತೆಯ ಕೊನೆಗೆ ಬಸ್ಸಿನಿಂದ ಹುಡುಗಿ ಇಳಿದು ಹೋಗುವಾಗ ಎಲ್ಲಿಗೆ? ಎಂದು ಕೇಳಬೇಕು ಅನಿಸಿದರು ಮೌನವಹಿಸುತ್ತಾಳೆ. ಏಕೆಂದರೆ ತನ್ನನ್ನು ತಿರುಗಿ ಅದೇ ಪ್ರಶ್ನೆ ಕೇಳಿದರೆ ಆಕೆಯಲ್ಲಿ ಯಾವುದೇ ಉತ್ತರವಿರುವುದಿಲ್ಲ. ಈ ಕತೆಯಲ್ಲಿ ಹೆಣ್ಣು ತನ್ನೊಳಗೆ ಏನೆಲ್ಲ ಅಂದುಕೊಳ್ಳುತ್ತಾಳೆ, ಬದುಕಿನಲ್ಲಿ ಎದುರಾಗುವ ಹಲವು ಸನ್ನಿವೇಶಗಳನ್ನು ಹೇಗೆ ಎದುರಿಸಲು ಪ್ರಯತ್ನಿಸುತ್ತಾಳೆ ಎಂಬುದನ್ನು ಚಿತ್ರಿಸಿದ್ದಾರೆ.

**' ಓಲೆಕಾರನ ಡೈರಿಯಿಂದ '** ಎಂಬ ಕತೆಯ ನಾಯಕಿ ಒಂದು ಪತ್ರಕ್ಕಾಗಿ ದಿನಾ ಕಾಯುತ್ತಾಳೆ. ಅದು ಬರಲಿಲ್ಲವೆಂದಾಗ ಬೇಸರಿಸಿದರು ಮರುದಿನವೂ ಮೊದಲಿದ್ದ ಭರವಸೆಯೊಂದಿಗೆ, ಸಂತೋಷದೊಂದಿಗೆ ಪತ್ರಕ್ಕಾಗಿ ನಿರೀಕ್ಷಿಸುತ್ತಾಳೆ. ಇಲ್ಲಿ ಒಂದು ಪತ್ರದಲ್ಲಿ ಅವಳ ಸಂಭ್ರಮ ಸಂತೋಷ ಅಡಗಿರುವುದನ್ನು ಕಾಣಬಹುದು. ಆ ಪತ್ರಕ್ಕಾಗಿ ಹಂಬಲಿಸುವ, ಅದು ದೊರೆತ ಕ್ಷಣವೇ ಕಣ್ಣಲ್ಲಿ ಮಿಂಚು ಹಾರಿಸಿ ಮನದ ತೃಪ್ತಿಯನ್ನೆಲ್ಲ ಕಣ್ಣಲ್ಲೆ ಅವಳು ಹೊಳೆಯಿಸುವುದನ್ನು ಕಾಣುತ್ತೇವೆ.

ಒಟ್ಟಿನಲ್ಲಿ, ಸ್ತ್ರೀ ಸಂದರ್ಭದ ವಿವಾಹ ಹಾಗೂ ಕುಟುಂಬ ಸಂಸ್ಥೆಗಳು ಅವಳನ್ನು ಸಂಪೂರ್ಣವಾಗಿ ಆವರಿಸಿಕೊಂಡಿದ್ದು, ಆಕೆಯ ಜೀವನದ ಎಲ್ಲ ವಿಚಾರಗಳು ಒಂದಲ್ಲ ಒಂದು ಬಗೆಯಲ್ಲಿ ಇದರೊಂದಿಗೆ ತಳಕು ಹಾಕಿಕೊಂಡಿದೆ. ವಿವಾಹ ಸಂಸ್ಥೆಯ ಸಂದರ್ಭಗಳಲ್ಲಿ ಸ್ತ್ರೀ ತೆಗೆದುಕೊಳ್ಳುವ ಸಣ್ಣದೊಂದು ಸ್ವತಂತ್ರ ನಿರ್ಧಾರಕ್ಕೂ ಆಕೆ ಅಪಾರವಾದ ಬೆಲೆ ತೆರುತ್ತಾಳೆ ಅವಿವಾಹಿತವಾಗಿ ಉಳಿಯುವ, ತನ್ನ ಇಚ್ಛೆಗಳಿಗನುಸಾರವಾಗಿ ಪತಿಯನ್ನು ಆರಿಸುವ, ವಿವಾಹ ಸಂಸ್ಥೆಯಿಂದ ಹೊರಬರುವ, ವಿವಾಹೇತರ ಸಂಬಂಧಗಳನ್ನು ಇರಿಸಿಕೊಳ್ಳುವ ಇತ್ಯಾದಿ ಯಾವುದೇ ವಿಚಾರಗಳಿದ್ದರೂ ಸ್ತ್ರೀ ಸ್ವತಂತ್ರ್ಯದ ನೆಲೆಗಳೆಂದು ಗುರುತಿಸಬಹುದಾಗಿದೆ. ಆದರೂ, ಈ ಸಾಹಸಗಳು ಆಕೆಯ ಸಮಾಜೋ ಆರ್ಥಿಕ ಸ್ಥಿತಿಗತಿಯ ಮೇಲೆ ಅಪಾರ ಪರಿಣಾಮವನ್ನ ಬೀರುತ್ತವೆ ಎಂಬುದನ್ನು ಮರೆಯುವಂತಿಲ್ಲ. ಹೀಗೆ ವಿವಾಹ ಸಂಸ್ಥೆಯು ಪಿತೃಪ್ರಧಾನ ಸಮಾಜದ ದ್ವಿಮುಖ ಮೌಲ್ಯನೀತಿಗೆ ವೈದೇಹಿಯವರ ಕತೆಗಳು ಪ್ರಮುಖ ಪ್ರಕ್ರಿಯೆಯಾಗಿ ತೋರುತ್ತವೆ. ಆದರೆ, ಸ್ತ್ರೀಯರ ಬಿಡುಗಡೆಯ ಸ್ಥಿತಿಯನ್ನು ವಿವಾಹ ಹಾಗೂ ಕುಟುಂಬ ಸಂಸ್ಥೆಗಳ ವಿಘಟನೆಯ ನೆಲೆಯಲ್ಲಿ ಸ್ವೀಕರಿಸಲು ವೈದೇಹಿಯವರಿಗೆ ಸಾಧ್ಯವಾಗಿಲ್ಲ. ಯಾವುದೇ ಸಾಮಾಜಿಕ ಬದಲಾವಣೆಯಾದರೂ ಅದು ಕುಟುಂಬ ಸಿಷ್ಟೆಯನ್ನು ಹಾಗೂ ವಿವಾಹದ ಪಾವಿತ್ರ್ಯತೆಯನ್ನು ಉಳಿಸಿಕೊಳ್ಳುತ್ತಲೇ ಬದುಕಬೇಕೆಂಬುದು ಬಹುಪಾಲು ಸ್ತ್ರೀಪಾತ್ರಗಳ ನಂಬಿಕೆ ಇದ್ದಂತೆ ಇಲ್ಲಿಯ ಕತೆಗಳಲ್ಲಿ ಬಿಂಬಿತವಾಗಿದೆ.

ಅಡಿಟಿಪ್ಪಣಿ :-

೧. ಅಲೆಗಳಲ್ಲಿ ಅಂತರಂಗ,ವೈದೇಹಿಯವರ ಸಮಗ್ರ ಕತೆಗಳ ಸಂಕಲನ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ. ೨೦೦೬, ಪುಟ– ೭೭

೨. ಅದೇ - ಪುಟ - ೭೮

೩. ಅದೇ - ಪುಟ –೨೮

೪. ಅದೇ - ಪುಟ - ೭೯

೫. ಅದೇ - ಪುಟ - ೮೦

೬. ಅದೇ – ಪುಟ – ೩೨

೭. ಅದೇ – ಪುಟ – ೩೫

೮. ಅದೇ – ಪುಟ – ೩೬

೯. ಡಾ. ಎಚ್. ಎಸ್ . ಶ್ರೀಮತಿ, ಚಹರೆ, ಇಳಾ ಪ್ರಕಾಶನ, ಬೆಂಗಳೂರು. ೧೯೯೯, ಪುಟ - ೩೨

**********

## ೨. ವ್ಯಕ್ತಿಗತ ನೆಲೆ

ಪ್ರತಿಯೊಂದು ಜೀವಿಗೂ ಅದರದೇ ಆದ ಆಲೋಚನೆ, ಅಭಿಪ್ರಾಯ, ಜೀವನದ ಬಗ್ಗೆ ನಿರೀಕ್ಷೆ ಮೊದಲಾದವುಗಳು ಇರುತ್ತವೆ. ಹೆಣ್ಣೇ ಆಗಲಿ ಗಂಡೇ ಆಗಲಿ ವೈಯಕ್ತಿಕ ಭಾವನೆಯನ್ನು ಹೊಂದಿದ್ದು ತಮ್ಮದೇ ಆದ ವ್ಯಕ್ತಿತ್ವವನ್ನು ಹೊಂದಿರುವ ಮತ್ತು ಹೊಂದುವ ಆಸೆಯನ್ನು ವ್ಯಕ್ತಪಡಿಸುತ್ತಾರೆ. ಆದರೆ ಸಮಾಜ ಗಂಡಿಗೆ ವ್ಯಕ್ತಿತ್ವ ನಿರ್ಮಾಣಗೊಳ್ಳಲು ನೀಡಿದಂತಹ ಪ್ರೋತ್ಸಾಹ, ಬೆಂಬಲವನ್ನು ಹೆಣ್ಣಿಗೆ ನೀಡಲಿಲ್ಲ. ಗಂಡಿನ ವ್ಯಕ್ತಿತ್ವ ರೂಪಣೆಗೆ ಪೂರಕ ಸಾಧನವಾಗಿ ಹೆಣ್ಣನ್ನು ಬಳಸಿದೆಯೇ ಹೊರತು ಅವಳಿಗೆ ಅವಳದೆ ಆದ ವ್ಯಕ್ತಿತ್ವವನ್ನು ರೂಪಿಸಲು ಅವಕಾಶ ನೀಡಲಿಲ್ಲ. ಹೆಣ್ಣಿಗೆ ಪರಂಪರಗತವಾಗಿಯು ಸಂಪ್ರದಾಯದ ಹೆಸರಿನಲ್ಲಿ, ಕುಟುಂಬದ ರಕ್ಷಣೆ, ಸ್ವಾಸ್ಥ್ಯದ ಹಿನ್ನಲೆಯಲ್ಲಿ ಹಲವಾರು ನಿರ್ಬಂಧಗಳನ್ನು ಏರುತ್ತ ಬಂದಿದೆ. ಹೆಣ್ಣಿಗೆ ಸ್ವತಂತ್ರ್ಯವಾಗಿ ಆಲೋಚಿಸುವ, ಬದುಕುವ, ಅಭಿಪ್ರಾಯ ವ್ಯಕ್ತಪಡಿಸುವ ಯಾವ ಅವಕಾಶವನ್ನು ನೀಡದೆ ಅವಳ ವ್ಯಕ್ತಿತ್ವವನ್ನು ಇಲ್ಲವಾಗಿಸುವ ಅಥವಾ ತನಗೆ ಬೇಕಾದ ರೀತಿಯಲ್ಲಿ ರೂಪಿಸಿಕೊಳ್ಳುವ ಹುನ್ನಾರನ್ನು ನಡೆಸುತ್ತ ಬಂದಿದೆ.

ಸ್ವಾತಂತ್ರ್ಯದ ಹಲವು ಮಗ್ಗಲುಗಳಾದ ಆಯ್ಕೆಯ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ಬೌದ್ಧಿಕ ಸ್ವಾತಂತ್ರ್ಯ ಹಾಗೂ ಸಾಂಸ್ಕೃತಿಕ ಅಭಿವ್ಯಕ್ತಿಯನ್ನು ಪ್ರಕಟಪಡಿಸಿಕೊಳ್ಳುವ ಅವಕಾಶಗಳಿಂದ ಹೆಣ್ಣು ವಂಚಿತಳಾಗಿಯೇ ಉಳಿಯುತ್ತ ಬಂದಳು. ತನ್ನ ಬದುಕಿನ ಬಗ್ಗೆ ತಾನೇ ನಿರ್ಧಾರ ತೆಗೆದುಕೊಳ್ಳುವುದಕ್ಕೆ, ಸಮಾಜದ ಒಳಿತು–ಕೆಡುಕುಗಳ ಬಗ್ಗೆ ತನ್ನ ಅಭಿಪ್ರಾಯಗಳಿಗೆ, ಆಲೋಚನೆಗಳಿಗೆ ಅವಕಾಶವೇ ಇಲ್ಲವಾಯಿತು. ಧರ್ಮ, ಜಾತಿ ಹೀಗೆ ಪುರುಷನು ತನ್ನ ಬದುಕನ್ನು ನಿರ್ಧರಿಸಿಕೊಳ್ಳುವಲ್ಲಿ ಯಾವ ರೀತಿಯ ಸ್ವಾತಂತ್ರ್ಯವನ್ನು ಹೊಂದಿದ್ದನೋ ಹಾಗೆಯೇ ಹೆಣ್ಣು ಕೂಡ ಅವಳ ಬದುಕನ್ನು ರೂಪಿಸಿಕೊಳ್ಳುವಲ್ಲಿ ಸರ್ವ ಸ್ವತಂತ್ರಳಾಗಿರಬೇಕು ಎಂಬ ವಿಶಾಲ ಮನೋಭಾವ ಪುರುಷ ಜಗತ್ತಿಗೆ ತೋರಲೇ ಇಲ್ಲ. ಕುಟುಂಬದೊಳಗಿನ ಸ್ತ್ರೀಯರ ಪ್ರಶ್ನೆಗಳು ವೈಯಕ್ತಿಕವಾಗಿರದೆ ಅದೊಂದು ಲಿಂಗಸಂಬಂಧಿ ಪ್ರಶ್ನೆಗಳಾಗಿ, ರಾಜಕೀಯ ಪ್ರಶ್ನೆಗಳೂ ಆಗಿ ತೋರಿದವು.

ವೈದೇಹಿಯವರು ತಮ್ಮ ಕತೆಗಳ ಮೂಲಕ ಪುರುಷಪ್ರಧಾನ ಸಮಾಜ ಹೆಣ್ಣನ್ನು ನಿಯಂತ್ರಿಸುವ ಬಗ್ಗೆ, ಶೋಷಣೆಯ ವಿಧಾನ, ದಬ್ಬಾಳಿಕೆಗಳನೆಲ್ಲ ಮೀರಿ ಹೆಣ್ಣು ತನ್ನ ಅಸ್ಮಿತೆಯನ್ನು ಕಂಡುಕೊಳ್ಳುವುದನ್ನು ಚಿತ್ರಿಸಿದ್ದಾರೆ. ಸಾಮಾಜಿಕ ಸಂಸ್ಥೆಗಳು ಹೆಣ್ಣಿನ ಮೇಲೆ ಹೇರುತ್ತ ಬಂದ ಸಾಮಾಜಿಕ ನಿರ್ಬಂಧಿತ ನೆಲೆಗಳನ್ನು ದಿಟ್ಟವಾಗಿ ನಿರಾಕರಿಸುವ ಛಲವನ್ನು ವೈದೇಹಿಯವರ ಹಲವಾರು ಕತೆಗಳಲ್ಲಿ ಕಾಣಬಹುದಾಗಿದೆ.

**"ಅಂತರಂಗದ ಪುಟಗಳು"** ಕತೆಯ ನಾಯಕಿ ಅಚಲ ಎಂಬ ಹೆಣ್ಣು ತನ್ನನ್ನು ನೋಡಲು ಬಂದ, ಒಪ್ಪಿದ ಗಂಡುಗಳನ್ನೆಲ್ಲ ತಿರಸ್ಕರಿಸುತ್ತಾಳೆ. "ರೇಶ್ಮೆಯಲ್ಲಿ ಚನ್ನದಲ್ಲಿ ಅದ್ದಿ............ ಹೆಂಗಸರ ಒಂದು ಮಾದರಿಯನ್ನಾಗಿ"ಮಾಡುವ ಮದುವೆಗಳನ್ನು ಕಂಡರೆ ಅಚಲಗಳಿಗೆ ಸಿಟ್ಟು. ಚಪ್ಪರ, ವಾದ್ಯ, ಉಡುಪು, ಶೃಂಗಾರ, ಆಭರಣ, ಅಂತಸ್ತು, ಆಶೀರ್ವಾದದ ಅಕ್ಷತೆ ಕಾಳುಗಳಿಗಾಗಿ"[೧] ಮದುವೆ ಆಗುವುದರಲ್ಲಿ ಆಕೆಗೆ ಯಾವುದೇ ಅರ್ಥವಿಲ್ಲ. "ಯಾರ ಕಣ್ಣಲ್ಲಿ ದೀಪದ ಕಾಂತಿಯಿರುತ್ತದೋ, ಯಾರನ್ನು ನೋಡಿದರೆ ಅವನ ಮಗುವನ್ನು ತನ್ನ ಗರ್ಭದಲ್ಲಿ ಧರಿಸಬೇಕು"[೨] ಎನಿಸುತ್ತದೋ ಅಂತವನನ್ನು ಮದುವೆಯಾಗಬೇಕು ಎಂಬುವುದು ಅಚಲಳ ವಿವಾಹದ ಬಗೆಗೆನ ನಿಲುವಾಗಿತ್ತು. ಹೆಣ್ಣಿನ ಈ ನಿಲುವನ್ನು ಸಮರ್ಥಿಸುವ ರೀತಿಯಲ್ಲಿ ಮನೋವಿಜ್ಞಾನಿ ಎರಿಕ್ ಎರಿಕ್‌ಸನ್‌ನ ಮಾತುಗಳು ಹೀಗಿವೆ. "ತನ್ನ ಪಾಲಿಗೆ ದೊರೆತ ಪುರುಷನ ಅಂಶವನ್ನು ತನ್ನೊಳಗೆ ಧಾರಣೆ ಮಾಡಿ, ಅದಕ್ಕೆ

ಸೂಕ್ತ ಪೋಷಣೆ ನೀಡಿ ಸಂತಾನವನ್ನು ಈ ಭೂಮಿಗೆ ತರುವ ಅವಳ ಅಂತಃ ಸಾಮಾರ್ಥ್ಯ ಮತ್ತು ಆನಂತರದಲ್ಲಿ ಆ ಸಂತಾನವನ್ನು ಸೂಕ್ತವಾಗಿ ಸಂಗೋಪನ ಮಾಡುವಲ್ಲಿ ಅವಳು ತೋರುವ ದೈಹಿಕ, ಮಾನಸಿಕ, ನೈತಿಕ ಸಾಮಾರ್ಥ್ಯಗಳು ಅವಳಿಗೆ ಪ್ರೌಢ ಬದುಕಿನ ಸಾರ್ಥಕತೆಯ ಭಾವವನ್ನು ನೀಡುತ್ತವೆ."[6] ಆಗ ಹೆಣ್ಣಿನ ಬದುಕು ಈ ಲೋಕದಲ್ಲಿ ಬಹು ಸುಖವೆನಿಸುತ್ತದೆ.

ಮದುವೆಯಾಗದೆ ಅಚಲ ಸುಖಿಯಲ್ಲ. ಮನೆಗೆಲಸದ ಸುಬ್ಬಿ ಮದುವೆಯಾಗದೆಯೇ ಮಗುವನ್ನು ಪಡೆದು ಧೈರ್ಯದಿಂದ ಬದುಕನ್ನು ನಿರ್ವಹಿಸುತ್ತಿರುವ ಆಕೆಯ ವೈಚಾರಿಕತೆ ಈಕೆಗೆ ಇಷ್ಟವಾಗುತ್ತದೆ. ಅದನ್ನು ಕಂಡು ತನಗೂ ಹಾಗಾಗಬೇಕು ಎಂದು ಆಸೆಪಡುತ್ತಾಳೆ. ಸುಬ್ಬಿಯನ್ನು ಇದರ ಬಗ್ಗೆ ಕೇಳಬೇಕು ಅಂದುಕೊಂಡರು ಕೇಳಲಾಗುವುದಿಲ್ಲ. ಅಚಲಳ ಸ್ಥಿತಿಯನ್ನು, ಮದುವೆಯಾದ ಆಕೆಯ ಸ್ನೇಹಿತೆಯರ ಜೀವನ ಸ್ಥಿತಿಗಳೊಂದಿಗೆ ಹೋಲಿಸುವುದರ ಮೂಲಕ ಲೇಖಕಿ ಸ್ತ್ರೀ ಬದುಕಿನ ವೈವಿಧ್ಯಗಳನ್ನು ಕತೆಗಳಲ್ಲಿ ತೋರಿಸಿದ್ದಾರೆ.

ಅಚಲಳ ಗೆಳತಿ ಮಂಜುಳ ಮದುವೆಯಾಗಿದ್ದು ಬೇರೆಯವನೊಡನೆ ಸಂಬಂಧವನ್ನು ಹೊಂದಿರುತ್ತಾಳೆ. ಅದರ ಬಗ್ಗೆ ಕೇಳಿದರೆ ಯಾವ ಹಿಂಜರಿಕೆಯು ಇಲ್ಲದೆ 'ಗಂಡನೊಟ್ಟಿಗೆ ಸೂಳೆಗಾರಿಕೆ ಮಾಡುತ್ತಿದ್ದೆ, ಇವನೊಟ್ಟಿಗೆ ಮಲಗಿದಾಗ ಬದುಕುತ್ತಿದ್ದೇನೆ ಎನಿಸಿತು'[7] ಎನ್ನುತ್ತಾಳೆ. ಇದು ಸಮಾಜದಿಂದ ಒಪ್ಪಿತವಲ್ಲದ ನಡವಳಿಕೆಯಾದರೂ ಕೂಡ ಅದನ್ನು ಧಿಕ್ಕರಿಸುವ ಹೆಣ್ಣಾಗಿದ್ದಾಳೆ. ಗಂಡು ತನ್ನ ಬಯಕೆಗಳನ್ನು ಪೂರೈಸಲು ಸಮರ್ಥನಲ್ಲ ಆದ ಕಾರಣ ತನಗೆ ಬೇಕಾದನ್ನು ಬೇರೊಬ್ಬನಿಂದ ಪಡೆಯುತ್ತೇನೆ ಎಂಬುವುದು ಅವಳ ಧೋರಣೆಯಾಗಿದೆ ಗಂಡಿನ ಈ ರೀತಿಯ ನಡುವಳಿಕೆಗಳನ್ನು ಹಲವು ಕಾರಣಗಳಿಂದ ಸಮರ್ಥಿಸುವ ಸಮಾಜ ಅದೇ ವರ್ತನೆ ಹೆಣ್ಣಿನದ್ದಾದರೆ ಅದನ್ನು ವಿರೋಧಿಸುತ್ತದೆ. ಆಗ ಸಮಾಜವು ನೈತಿಕತೆಯ ಪ್ರಶ್ನೆಯನ್ನು ಎತ್ತುತ್ತದೆ ಎಂಬುವುದನ್ನು ಲೇಖಕಿ ಇಲ್ಲಿ ಗುರುತಿಸುತ್ತಾರೆ.

ಸುಬ್ಬಿಯ ವಿವಾಹದ ಪೂರ್ವ ಸಂಬಂಧ, ಮಂಜುಳಳ ವಿವಾಹೇತರ ಸಂಬಂಧ, ಸರಿತಾ-ವಿಜಯರ ಚೌಕಟ್ಟಿನೊಳಗಣ ಲೈಂಗಿಕ ಬದುಕು-ಇವುಗಳೊಂದಿಗೆ ಅಚಲಳ ಲೈಂಗಿಕ ಅನುಭವರಹಿತ ಸ್ಥಿತಿಯನ್ನು ತೂಗಿ ನೋಡಿ ಜೀವನ ಸಾಫಲ್ಯದ ಪ್ರಶ್ನೆಗಳನ್ನು ಲೇಖಕಿ ಓದುಗರ ಮುಂದಿಡುತ್ತಾರೆ. ಅಚಲಳ ಸ್ವಗತ ಅವಳ ಏಕಮುಖ ಸಮರ್ಥನೆಯದ್ದಲ್ಲ. ಅವಳ ಪ್ರಜ್ಞೆ ಅವಳ ಮಿತಿಗಳನ್ನು ಧ್ಯಾನಿಸುತ್ತದೆ. ಹೆಣ್ಣನ್ನು ನೋಡಲು ಬಂದವರ ಮುಂದೆ ಶೃಂಗರಿಸಿಕೊಂಡು ಕೂತ ಹೆಣ್ಣಿನ ಬಹಿರಂಗಕ್ಕೆ ತದ್ವಿರುದ್ಧವೇ ಆಗಿರಬಹುದಾದ ಅಂತರಂಗದ ಪುಟಗಳನ್ನು ಹೊರೆತೆಗೆಯುವ ಮೂಲಕ ಲೇಖಕಿ ಹೆಣ್ಣಿನ ಸಾಂಪ್ರದಾಯಿಕ ಚಿತ್ರಕ್ಕೆ ತೀರಾ ಭಿನ್ನವಾದ ಚಿತ್ರವೊಂದನ್ನು ನಮ್ಮ ಮುಂದಿರಿಸುತ್ತಾರೆ. ತನಗಿಷ್ಟವಾದ ಹುಡುಗನನ್ನು ಮನೆಯವರ ಅನುಮತಿ ಪಡೆಯದೆ ಆಯ್ಕೆ ಮಾಡಿಕೊಳ್ಳುತ್ತಾಳೆ. ಆದರೆ ಅವಳ ಈ ಆಯ್ಕೆಯ ಹಿನ್ನೆಲೆಯಲ್ಲಿ ಅವಳ ಮನಸ್ಸಿನಲ್ಲಿ ಹಲವು ರೀತಿಯ ಸಂಘರ್ಷಗಳು ಏರ್ಪಡುತ್ತವೆ. ಕೌಟುಂಬಿಕ ಪರಿಸ್ಥಿತಿ ಮತ್ತು ಒತ್ತಡವನ್ನು ಮೀರಿ ತನ್ನ ಸ್ವತಂತ್ರ್ಯಕ್ಕೆ ಅಚಲ ಒತ್ತುಕೊಡುತ್ತಾಳೆ. ಇಲ್ಲಿ ಅವಳಿಗೆ ತನ್ನ ವ್ಯಕ್ತಿತ್ವ ಮುಖ್ಯವಾಗುತ್ತದೆ. ತನ್ನ ಆಸೆ-ಕನಸುಗಳ ಈಡೇರಿಕೆಯೊಂದಿಗೆ ತನ್ನ ಅಸ್ತಿತ್ವವನ್ನು ಸ್ಥಾಪಿಸಬಯಸುತ್ತಾಳೆ.

ಬದುಕನ್ನು ಕುರಿತ ಹೆಣ್ಣಿನ–ಪ್ರೀತಿ, ಬದ್ಧತೆ ಮತ್ತು ಶ್ರದ್ಧೆ ಇವುಗಳಿಗೆ ವೈದೇಹಿ ಹೆಚ್ಚಿನ ಒತ್ತನ್ನು ಕೊಡುತ್ತಾರೆ. ಅವರ ಕತೆಗಳಲ್ಲಿ ಬರುವ ಪುಟ್ಟಮ್ಮತ್ತೆ, ಶಕುಂತಲೆ, ಅಕ್ಕು ಹೀಗೆ ಯಾರೇ ಇರಬಹುದು. ............... ಹೆಣ್ಣು ಗಂಡಿಗಿಂತ ಹೆಚ್ಚು ಶಕ್ತಿವಂತಳೂ ಚೈತನ್ಯದಾಯಕಳೂ ಆಗಿ ಕಾಣಿಸುವುದು ಪ್ರಧಾನವಾಗಿ ಈ ಅಂಶಗಳಿಂದಲೇ. ಆದ್ದರಿಂದಲೇ ಬದುಕಿನ ಮೇಲೆ ಹೆಣ್ಣಿಗಿರುವ ಹಿಡಿತ ಅಪಾರವಾದದ್ದು. ಆಯ್ಕೆಯ ಬದುಕಿಲ್ಲದ, ಮನ್ನಣೆಯಿಲ್ಲದ, ಸ್ವೀಕಾರವಿಲ್ಲದ ಬದುಕನ್ನು ಕುರಿತು ಹೆಣ್ಣಿಗೆ ಇಂತಹ ಜೀವನ ಪ್ರೀತಿ ಹೇಗೆ ಸಾಧ್ಯವಾಗುತ್ತದೆ ಎನ್ನುವ ಪ್ರಶ್ನೆ ಅವರ ಕತೆಗಳಲ್ಲಿ ವ್ಯಕ್ತವಾಗುತ್ತದೆ. ಅದನ್ನು ಕುರಿತ ಹೆಮ್ಮೆ, ಮೆಚ್ಚುಗೆ, ವಿಷಾದ, ಅವಡು ಕಚ್ಚಿದ ಕೋಪ ಎಲ್ಲವೂ ಕತೆಗಳಲ್ಲಿ ಅಭಿವ್ಯಕ್ತವಾಗಿದೆ. ಪುರುಷರನ್ನು ಕುರಿತ ವ್ಯಂಗ್ಯದ ಅಸೀಮ ತಿರಸ್ಕಾರದ ಎಳೆಯೊಂದು ಇವರ ಕತೆಗಳಲ್ಲಿ ಉದ್ದಕ್ಕೂ ಹರಿಯುತ್ತಿರುತ್ತದೆ. ಅದು ಅಪ್ಪ ಇರಬಹುದು, ಗಂಡ, ಅಣ್ಣ, ತಮ್ಮ ಯಾರೇ ಇರಬಹುದು. ಆದರೆ ಅದು ಎಲ್ಲೂ ಪುರುಷ ದ್ವೇಷದ ರೂಪದಲ್ಲಿ ಕಾಣಿಸಿಕೊಳ್ಳುವುದಿಲ್ಲ ಎನ್ನುವುದು ಇಲ್ಲಿಯ ಕತೆಗಳ ವಿಶೇಷ. ಹೆಣ್ಣನ್ನು ಅವಳ ಎಲ್ಲ ಸಾಧ್ಯತೆಯಲ್ಲಿ ಪರೀಕ್ಷಿಸುತ್ತಲೇ, ಬದುಕು ಒಡ್ಡುವ ಎಲ್ಲ ಸವಾಲುಗಳನ್ನು ಅವಳು ಎದುರಿಸುವ ವಿವರಗಳನ್ನು ಮಂಡಿಸುತ್ತಲೆ, ಪರೋಕ್ಷವಾಗಿ ವ್ಯವಸ್ಥೆಯನ್ನು ಪ್ರಶ್ನಿಸುತ್ತಾ ಹೊಗುತ್ತಾರೆ. ಪುರುಷನಿಗಿಂತ ವ್ಯವಸ್ಥೆ ಮುಖ್ಯವಾಗಿ ಕಾಣಿಸುತ್ತದೆ. ಹೆಣ್ಣಿನ ಸಾರ್ಥಕತೆಯೆಂದರೆ ಅವಳಿಗೆ ಹೆಂಡತಿಯಾಗಿ ತಾಯಿಯಾಗಿ ತೃಪ್ತಿಯನ್ನು ಅನುಭವಿಸುವ ಅವಕಾಶ ಬಾಳಿನಲ್ಲಿ ಒದಗಿ ಬರಬೇಕು ಎಂಬುದನ್ನು ಎಲ್ಲ ಸಾಂಪ್ರದಾಯಿಕ ಚಿಂತನೆಗಳು ಹೇಳುತ್ತಾ ಬಂದಿವೆ. ಇದೇ ಸತ್ಯ ಎಂದು ಅವಳನ್ನು ನಂಬಿಸಿಕೊಂಡೇ ಬರಲಾಗಿದೆ.ಫ್ರಾಯ್ಡ್ ಮನೋವಿಜ್ಞಾನದಂತಹ ಆಧುನಿಕ ಚಿಂತನೆಗಳೂ ಈ ಸತ್ಯದಲ್ಲಿಯೇ ಹೆಣ್ಣಿನ ಬದುಕಿನ ಪರಮೋಚ್ಚ ಸಾಧನೆಯೂ, ಅವಳ ಜೀವನ ತೃಪ್ತಿಯೂ ಅಡಗಿದೆ ಎಂದೇ ಹೇಳುತ್ತವೆ. ............. ಇದಕ್ಕಿಂತಲೂ ಮುಖ್ಯವಾಗಿ ಹೆಣ್ಣು ತನ್ನ 'ಹೆಣ್ಣುತನ' ವನ್ನು ಕಾಯ್ದು ಕೊಳ್ಳಬೇಕಾದ ನಿಲುವುಗಳ ಬಗೆಗೆ ಖಚಿತವಾದ ನಿರ್ದೇಶನಗಳನ್ನು ನೀಡಲಾಗಿದೆ. ಹೆಣ್ಣಿನ ಸೌಖ್ಯದ 'ಗುಟ್ಟು' ಕುಟುಂಬದ ಸೌಖ್ಯದಲ್ಲಿಯೇ ವಿಲೀನಗೊಂಡಿದೆ ಅಂದರೆ ಕುಟುಂಬದ ಸೌಖ್ಯದ ಪ್ರಶ್ನೆಯ ಮುಂದೆ ಅವಳ ವೈಯಕ್ತಿಕ ಬದುಕು ಕಡೆಗಣಿಸಲ್ಪಟ್ಟಿದೆ. ಈ ಬಗ್ಗೆ ವೈದೇಹಿಯವರ ಕತೆಗಳಲ್ಲಿ ಬರುವ ಸ್ತ್ರೀಪಾತ್ರಗಳು ಪರ–ವಿರೋಧಿ ಧೋರಣೆಗಳದ್ದಾಗಿವೆ. ವಿವಾಹ, ಕುಟುಂಬ, ಗಂಡ, ಮಕ್ಕಳು, ಅಧಿಕಾರ–ಎಂಬ ಆವರಣವನ್ನು ಪ್ರಶ್ನಿಸುವುದು ಒಂದು ನೆಲೆಯಾದರೆ ಇದನ್ನು ಪ್ರಶ್ನಿಸುವ ಹೆಣ್ಣು ಸ್ವಂತ ಬದುಕನ್ನು ಜಟಿಲಗೊಳಿಸಿಕೊಳ್ಳ ಬೇಕಾಗುತ್ತದೆ ಎಂಬ ವಿಚಾರವೂ ಇದೆ.

ಹೆಣ್ಣಿನ ಚೈತನ್ಯ ಮೂಲಗಳನ್ನು ಹುಡುಕುವುದು, ಅವುಗಳ ಶಕ್ತಿ ಸೌಂದರ್ಯಗಳನ್ನು ಕಂಡುಕೊಳ್ಳುವುದು ವೈದೇಹಿಯವರ ಕತೆಗಳ ಕೇಂದ್ರ ಆಶಯಗಳಲ್ಲೊಂದು. **"ತಾಯ್ತನ"** ಅವರು ಗುರುತಿಸಿದ ಮುಖ್ಯವಾದ ಒಂದು ಚೈತನ್ಯದ ಮೂಲ. **"ಗುಲಾಬಿಯ ಮೃದು ಪಾದಗಳು"** ಎಂಬ ಕತೆ ಮೂಲತಃ ಇದು ತಾಯ್ತನದ ಸುಖ, ಪುಳಕ, ರೋಮಾಂಚನ, ಹೋಲಿಕೆ ಇಲ್ಲದ, ಪರ್ಯಾಯವಿಲ್ಲದ ಅಪೂರ್ವ ಅನುಭವವನ್ನು ಕುರಿತದ್ದಾಗಿದೆ. ಜಗತ್ತಿನ ಅಪೂರ್ವ ಸೃಷ್ಟಿಯಾದ ಮಗು ಹೆಣ್ಣಿನ ಬದುಕಿನ ಏಕತಾನತೆ, ಬೇಸರ, ಜಿಗುಪ್ಸೆ ಎಲ್ಲವನ್ನು ಪರಿಹರಿಸಬಲ್ಲ ಮಾಂತ್ರಿಕ ಶಕ್ತಿ ಉಳ್ಳದ್ದು. ಬದುಕಿನಲ್ಲಿ ಉಲ್ಲಾಸವನ್ನು ಧನ್ಯತೆಯನ್ನು ತರಬಲ್ಲದು. ಈ ದೃಷ್ಟಿಯಿಂದ ಈ ಕತೆ ಮುಖ್ಯವಾಗಿ ತೋರುತ್ತದೆ. ಈ ಕತೆಯ ನಾಯಕಿಗೆ ಮದುವೆಯಾಗಿದೆಯೋ ಇಲ್ಲವೋ, ಅವಳ ವಯಸ್ಸು,

ಕೌಟುಂಬಿಕ ಒಸ್ನೆಲೆ. ಅವಳ ಆತಂಕಗಳು, ನಿರಾಸೆಗಳು ಯಾವುದೂ ಈ ಕತೆಯಲ್ಲಿ ಮೇಲ್ನೋಟಕ್ಕೆ ವ್ಯಕ್ತವಾಗುವುದಿಲ್ಲ. ತಾಯ್ತನದ ಅನುಭವವನ್ನು ಪಡೆಯದೇ ಇರುವ ಈ ನಾಯಕಿ, ಕತೆಯುದ್ದಕ್ಕೂ ಅದರ ಅನುಭವವನ್ನು ಅನುಭವಿಸುತ್ತಾ ಹೋಗುತ್ತಾಳೆ. ಸಹಜ ಮಗುವಿನ ತಾಯಿ ಅನುಭವಿಸುವಷ್ಟೆ ತೀವ್ರವಾಗಿ ಆಪ್ತವಾಗಿ ಅವಳು ಮಗುವಿನ ಬದುಕಿಗೆ ಸ್ಪಂದಿಸಲು ಹವಣಿಸುತ್ತಾಳೆ. ಇದೇ ಈ ಕತೆಯ ವಿಶೇಷ. ಇಲ್ಲಿ ಹೆಣ್ಣಿನ ವಿಶೇಷ ಅನುಭವದ ಮೂಲಕ ಅವಳು ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ಯತ್ನಿಸುವುದನ್ನು ಕಾಣಬಹುದಾಗಿದೆ.

**"ಶಕುಂತಲೆಯೊಂದಿಗೆ ಕಳೆದ ಅಪರಾಹ್ನ"** ಈ ಕತೆಯಲ್ಲಿ ತನ್ನ ಬದುಕಿನ ಪುನರಾವಲೋಕನಕ್ಕೆ ತೊಡಗಿಕೊಳ್ಳುವ ಆಧುನಿಕ ಹೆಣ್ಣಿನ ಪ್ರತಿನಿಧಿಯಾಗಿ ಶಕುಂತಲೆಯ ಪಾತ್ರ ಚಿತ್ರಿತವಾಗಿದೆ. ದುಷ್ಯಂತ ಹಾಗೂ ತನ್ನ ನಡುವಿನ ಸಂಬಂಧವನ್ನು ಕುರಿತು ಯೋಚಿಸುವಾಗ ದುಷ್ಯಂತನ ಮೇಲೆ ಆರೋಪ ಹೊರಿಸುವುದಕ್ಕೆ ಕಾರಣಗಳೇ ಇಲ್ಲ ಎನಿಸುತ್ತದೆ. ಪ್ರೀತಿಯ ದಿವ್ಯವಾದ ಅನುಭವವನ್ನು ಒದಗಿಸಿಕೊಟ್ಟು ಅವನಿಗೆ ತಾನು ಕೃತಜ್ಞಳಾಗಿರಬೇಕೆಂದೇ ಅವಳಿಗೆ ಅನ್ನಿಸುತ್ತದೆ. ಆದರೆ, ತುಂಬಿದ ಸಭೆಯಲ್ಲಿ ಅವಳನ್ನು ದುಷ್ಯಂತ ನಿರಾಕರಿಸಿದಾಗ ಉಂಗುರವನ್ನು ತೋರಿಸಿ ತಮ್ಮಿಬ್ಬರ ಸಂಬಂಧವನ್ನು ಸಾಬೀತುಪಡಿಸುವುದು ಅವಳಿಗೆ ಹೇಸಿಗೆಯೆನ್ನಿಸಿ ಅಲ್ಲಿಂದ ಹೊರಬರುತ್ತಾಳೆ. "ಗೌತಮಿ ದುಃಖಿಸಿದಳು. 'ಉಂಗುರ ತೋರಿಸಬಾರದೇ? ಎಂದಳು, ಆದರೆ ಉಂಗುರ ತೋರಿಸಿ ಪ್ರೇಮದಾನ ಪಡೆಯುವಷ್ಟು ಶೂನ್ಯಳೇನು ನಾನು? ತೋರಿಸುದಿಲ್ಲವೆಂದರೂ ಉದ್ಧಟತನವಾಗುತ್ತದೆ. ಅದು ಕಳೆದು ಹೋಯಿತೆಂದೇ ದುಃಖ ನಟಿಸಿದೆ. ಮರೆವಿನ ನಟನೆಗೆ ಉಂಗುರ ಎಂದಾದರೂ ಔಷಧಿಯಾಗುವುದೆಂತ ಇದೆಯೇ? "[5] ಎಂದು ಪ್ರಶ್ನಿಸುತ್ತಾಳೆ. ಇಲ್ಲಿಯ ಶಕುಂತಲೆಯ ಧೋರಣೆಗಳು ಹೆಣ್ಣು ವಿಮೋಚನೆಯತ್ತ ಸಾಗುತ್ತಿರುವ ಸೂಚನೆಗಳಿವೆ. ತನಗೆ ಸರಿ ಹೊಂದದ ಗಂಡನಿಂದ ವಿಮುಕ್ತಿ ಪಡೆಯಬೇಕೆನ್ನುವ ಸ್ತ್ರೀ ಸ್ವಾತಂತ್ರ್ಯದ ತುಡಿತವಿದೆ. ಅಲ್ಲದೆ, ಪುರಾಣ ಪ್ರತಿಮೆಗಳನ್ನು, ಪುರಾಣದ ವಸ್ತುವನ್ನ ಪುನರ್ ಪರಿಶೋಧಿಸುವ ನೆಲೆ ವೈದೇಹಿಯವರ ಈ ಕತೆಯ ವೈಶಿಷ್ಟ್ಯವಾಗಿದೆ.

ಈ ಘಟ್ಟದಲ್ಲಿ ತಾನು ಅದರ ಬಗ್ಗೆ ಅಷ್ಟೊಂದು ಯೋಚಿಸದೇ ಇರುವುದಕ್ಕೆ ಅವಳು ಕೊಡುವ ಕಾರಣ ನೋಡಿ, "ಲೋಕವನ್ನೇ ಧಿಕ್ಕರಿಸುವಂತಹ ಸುಖ ನನ್ನ ಹೊಟ್ಟೆಯಲ್ಲಿ ಬೆಳೆಯುತ್ತಿತ್ತು. ಆ ಸುಖದೆದುರಿಗೆ ದುಷ್ಯಂತನ ನಿರಾಕರಣೆ, ಲೋಕಾಪವಾದ ಎಲ್ಲವೂ ಅವಳಿಗೆ ಎರಡನೆಯದಾಗಿ ಕಾಣಿಸುತ್ತದೆ. ಬದುಕಿನಲ್ಲಿ ಮಗು ಆಸೆಯನ್ನು, ಉತ್ಸಾಹವನ್ನೂ, ಬೆಳಕನ್ನೂ ತರುವ ಸಾಧನವಾಗುತ್ತದೆ. ಆದ್ದರಿಂದಲೇ ತಾಯ್ತನ ಅವಳಿಗೆ ಸರ್ವಸ್ವ"[6] ವಾಗುತ್ತದೆ.

ಈ ಕತೆಗೆ ಇನ್ನೊಂದು ವಿಭಿನ್ನವಾದ ಆಯಾಮವೂ ಇದೆ. ಶಕುಂತಲೆ ಈ ಕತೆಯುದ್ದಕ್ಕೂ ಸ್ವತಂತ್ರ್ಯ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾಳೆ. ತನ್ನ ಬದುಕಿನ ಆಗು ಹೋಗುಗಳಿಗೆ ತಾನೇ ಜವಾಬ್ದಾರಳು ಎನ್ನುವ ವ್ಯಕ್ತಿವಾದಿ ನಿಲುವಿನಿಂದ ಶಕುಂತಲೆ ಹೊರಡುತ್ತಾಳೆ. ದುಷ್ಯಂತ ತನ್ನನ್ನು ಮರುಳು ಮಾಡಿದ್ದಲ್ಲ ತಾನು ಅವನಿಗೆ ಮರುಳಾದದ್ದು ಎನ್ನುವುದನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತಾಳೆ. ವಾಸ್ತವ ಕಣ್ಣೆದುರಿಗೆ ಇದ್ದಾಗಲೂ ಅದನ್ನು ಧಿಕ್ಕರಿಸಿ ನಡೆಯುವಷ್ಟು ಮೋಹ ತನಗೆ ಅವನ ಮೇಲಿತ್ತು ಎಂದು ಹೇಳುವಾಗ ಅವಳಿಗೆ ಯಾವ ಪಾಪ ಪ್ರಜ್ಞೆಯೂ ಇಲ್ಲ. ಈ ಅಂಶವೇ ಸಾಂಪ್ರದಾಯಿಕ ಶಕುಂತಲೆಗಿಂತ ವೈದೇಹಿಯವರ ಈ ಶಕುಂತಲೆ ಭಿನ್ನವಾಗಿ ಕಾಣುವುದು.

ಇಷ್ಟಕ್ಕೂ ದುಷ್ಯಂತ ಯಾವುದನ್ನೂ ಮುಚ್ಚಿಟ್ಟವನೂ ಆಗಿರಲಿಲ್ಲ. ತನ್ನ ಬದುಕಿನ ಕುರಿತ ಸೂಚನೆಗಳನ್ನು ಅವನು ಮೊದಲೇ ಹೇಳಿದ್ದ. ಅನುಸೂಯೆ ಅವನಿಗಿರುವ ಮಿಕ್ಕ ಸಖಿಯರ ಬಗ್ಗೆ ಪ್ರಶ್ನಿಸಿದಾಗ ಅದನ್ನೇ ನೆಪವನ್ನಾಗಿಟ್ಟುಕೊಂಡು ದುಷ್ಯಂತ ಶಕುಂತಲೆಯನ್ನು ಕೇಳುತ್ತಾನೆ. "ಅಂದು ನಿನ್ನ ಸಖಿ ಕೇಳಿದಳಲ್ಲ ಹಾಗೆ, ನನಗೆ ಇನ್ನಷ್ಟು ಮಂದಿ ನಲ್ಲೆಯರಿದ್ದರೆ ಏನು ಮಾಡುತ್ತೀಯಾ?....."[೭]

ಲೋಕ ಜ್ಞಾನವಿಲ್ಲದ, ಬದುಕಿನ ವಾಸ್ತವದ ಅನುಭವವಿಲ್ಲ ಎಲ್ಲಾ ಮುಗ್ಧ ಪ್ರೇಮಿಗಳ ಹಾಗೆ ಇವಳೂ ಉತ್ತರ ಕೊಡುತ್ತಾಳೆ. " ನೀ ನನ್ನೊಡನಿರುವಾಗ ಅವರ ನೆನಪನ್ನು ಇಲ್ಲಿಗೆ ತರುವುದಿಲ್ಲವಲ್ಲ ಅಷ್ಟು ಸಾಕು!"[೮] ದುಷ್ಯಂತ ಕೊಟ್ಟ ಸೂಚನೆಗಳನ್ನು ಗ್ರಹಿಸದೇ ಹೋದ ತನ್ನ ಮಿತಿಯನ್ನು ಅವನ ಮೇಲೆ ಹೊರಿಸಲು ಶಕುಂತಲೆ ಸಿದ್ಧಳಿಲ್ಲ. ತನ್ನ ಪ್ರೀತಿಗೆ ಅಪಾತ್ರನು ಎನಿಸಿದ್ದರೂ ಅದಕ್ಕಾಗಿ ಅವಳು ಯಾರನ್ನೂ ದೂಷಿಸಲಾರಳು. ಬದಲಾಗಿ ಪರಿಶುದ್ಧವಾಗಿ ಪ್ರೇಮಿಸುವಂತಹ ಅನುಭವ ನೀಡಿದ ಆತನಿಗೆ ಕೃತಜ್ಞತೆ ಅರ್ಪಿಸುತ್ತಾಳೆ. ತನ್ನ ಪ್ರೇಮ ದಾಂಪತ್ಯವಾಗಿ ಮುಂದುವರಿಯಲಾಗದ್ದರ ಬಗ್ಗೆ ಅವಳಿಗೆ ನೋವಿದೆ. ವಿಷಾದವಿದೆ. ಆದರೆ ತಾನು ಎಡವಿದರ ಬಗ್ಗೆ ಅವಳಿಗೆ ದುಃಖವಿಲ್ಲ. ಬದುಕಿನಲ್ಲಿ ಹೆಣ್ಣಿಗೆ ಸಾಮಾನ್ಯವಾಗಿ ಎದುರಾಗುವ ತೇಪೆ ಹಾಕುವ ಸಾಧ್ಯತೆಯನ್ನು, ಪರಿಹಾರವನ್ನು ಅವಳು ಧೃಡವಾಗಿ ನಿರಾಕರಿಸುತ್ತಾಳೆ. ಕರೆಯಲು ಬರುವ ದುಷ್ಯಂತನೊಂದಿಗೆ ಎಲ್ಲ ಮರೆತು 'ಸುಖ'ವಾಗಿ ಬದುಕು ನಡೆಸಲು ಅವಳು ಸಿದ್ಧಳಿಲ್ಲ. ಅವನ ಆಹ್ವಾನವನ್ನು ಕೋರಿಕೆಯನ್ನು ನಿರಾಕರಿಸುವ ಶಕುಂತಲೆ ತಾಯಿಯಾಗಿ ತನ್ನ ಜವಾಬ್ದಾರಿಯನ್ನು ಮರೆಯುವುದಿಲ್ಲ. ಮಗನಿಗೆ ಆ ರಾಜ್ಯದ ಮೇಲಿರುವ ಅಧಿಕಾರವನ್ನು ಕಿತ್ತುಕೊಳ್ಳುವುದಿಲ್ಲ. ಮಗನನ್ನು ಅವನ ಹಕ್ಕಿಗೆ, ಬದುಕಿಗೆ ಒಪ್ಪಿಸಿ ತಾನು ತನ್ನದೇ ಏಕಾಂತದ ಬದುಕಿನಲ್ಲಿ ಉಳಿಯುತ್ತಾಳೆ. ಶೋಷಣೆಯ ಅರಿವಿದ್ದೂ ಮಾನವೀಯ ಭಾವನೆಯಿಂದ ಸಹನೆ ತಾಳುವ ಶಕುಂತಲೆ ಅಗತ್ಯಬಿದ್ದಾಗ ತನ್ನ ವ್ಯಕ್ತಿ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವ ದಿಟ್ಟ ಹೆಣ್ಣಾಗಿ ಗಮನಸೆಳೆಯುತ್ತಾಳೆ. ಒಟ್ಟಿನಲ್ಲಿ ಈ ಕತೆ, ಲಿಂಗರಾಜಕಾರಣದ ಸ್ವರೂಪವನ್ನು, ಅಂದರೆ, ಹೆಣ್ಣಿನ ಬದುಕಿಗೆ ಸಂಬಂಧಿಸಿದ ಪೂರ್ವಕಲ್ಪನೆಗಳನ್ನು, ವಾಸ್ತವಗಳನ್ನು ವಿಶ್ಲೇಷಣೆಗೆ ಒಡ್ಡಲಾಗಿದೆ. ಮಹಿಳೆಯರ ಸಮಸ್ಯೆಗಳಿಗೆ, ಆಧುನಿಕ ನೆಲೆಯಲ್ಲಿ ಕಂಡುಕೊಳ್ಳಬಹುದಾದ ಪರಿಹಾರದ ಸಾಧ್ಯತೆಗಳನ್ನು ಲೇಖಕಿ ಇಲ್ಲಿ ವ್ಯಕ್ತಪಡಿಸಿದ್ದಾರೆ.

**"ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು"** ಕತೆಯು ಮೇಲ್ನೋಟಕ್ಕೆ 'ತಲೆಮಾರಿನ ಅಂತರ'ದ ಕತೆಯಾಗಿ ಕಂಡರೂ ಆಳದಲ್ಲಿ ಬದುಕಿನ ಮೂಲಭೂತ ಸತ್ಯಗಳಿಗೆ ಕನ್ನಡಿ ಹಿಡಿಯುತ್ತದೆ. ಹಾಗೆ ನೋಡಿದರೆ, ಇಲ್ಲಿನ ಅಜ್ಜಿ ಮತ್ತು ಮೊಮ್ಮಗಳಲ್ಲಿ ಅನೇಕ ಸಾಮ್ಯ ಅಂಶಗಳೂ ಇವೆ. ಇಬ್ಬರೂ ಬದುಕಿಗೆ ಬೆನ್ನು ತಿರುಗಿಸಿದವರೂ ಅಲ್ಲ. ಆದರೆ ಇವರಿಬ್ಬರ ನಡುವೆ ಮೂಲಭೂತವಾದ ಕೆಲವು ಭಿನ್ನತೆಗಳಿವೆ. ಬದುಕಿನ ವಾಸ್ತವ ಪುಟ್ಟಮ್ಮತ್ತೆಯನ್ನು ಹಣ್ಣಾಗಿ ಮಾಡಿದೆ. ಬದುಕನ್ನು ಹೇಗಿದೆಯೋ ಹಾಗೆ ಸ್ವೀಕರಿಸುವುದನ್ನು ಅವಳು ಕಲಿತಿದ್ದಾಳೆ ಅಥವಾ ಕಲಿಸಲಾಗಿದೆ. ಆದರೆ ಕಮಲಾವತಿ ಆ ಸಿದ್ಧ ಪಾಠಗಳನ್ನು ಕಲಿಯಲು ನಿರಾಕರಿಸುತ್ತಾಳೆ. ಕಮಲಾವತಿಗೆ ಮುಖ್ಯವಾಗಿ ಎರಡು ಸಮಸ್ಯೆಗಳಿವೆ. ಒಂದು ಹೆಣ್ಣಾಗಿರುವುದು ಮತ್ತೊಂದು ಬಡತನ.

ಹೆಣ್ಣಾಗಿರುವ ಕಾರಣದಿಂದಲೇ ಎದುರಾಗುವ ಸಮಸ್ಯೆಗಳನ್ನು ಹೆಣ್ಣು ಎನ್ನುವ ಕಾರಣಕ್ಕೆ ಪರಿಹರಿಸಿಕೊಳ್ಳಲು ಯತ್ನಿಸುವುದೇ ಕಮಲಾವತಿಯ ವಿಶೇಷ. ತಗ್ಗಿ ಬಗ್ಗಿ ನಡೆಯುವುದನ್ನು ಅವಳು ಒಪ್ಪುವುದಿಲ್ಲ. ತಮಗೆ ಆಶ್ರಯಕೊಟ್ಟ

ಮಗಳನ್ನು ಗಂಡು ನೋಡಲು ಬರುವ ಪ್ರಸಂಗದಲ್ಲಿನ ಕಮಲಾವತಿಯ ನಡುವಳಿಕೆ ಇದಕ್ಕೆ ಒಂದು ಉತ್ತಮ ಉದಾಹರಣೆಯಾಗಿದೆ. ತನ್ನ ಸೌಂದರ್ಯದ ಆಕರ್ಷಕ ವ್ಯಕ್ತಿತ್ವದ ಸಂಪೂರ್ಣ ಅರಿವಿರುವ ಕಮಲಾವತಿಗೆ ಗೊತ್ತಿದೆ, ತನ್ನ ಕಾರಣಕ್ಕೆ ರಂಗಪ್ಪಯ್ಯನ ಮನೆಗೆ ಹೆಣ್ಣನ್ನು ನೋಡಲು ಬಂದ ಗಂಡು ಹುಡುಗಿಯನ್ನು ತಿರಸ್ಕರಿಸಬಹುದು ಆದ್ದರಿಂದಲೇ ತನ್ನ ಆಶ್ರಯದಾತರ ಮನೆಯಲ್ಲಿಯೇ ಇರಲು ಹಟ ಮಾಡುತ್ತಾಳೆ. ಅಜ್ಜಿಯ ಬಲವಂತಕ್ಕೆ ಅಲ್ಲಿಂದ ಹೊರಬೀಳುವ ಕಮಲಾವತಿ ಇನ್ನೊಂದು ಸಾಹಸಕ್ಕೆ ತೊಡಗುತ್ತಾಳೆ. ತನ್ನ ಮನೆಯ ಎದುರುಗಡೆಯಿಂದಲೇ ರಂಗಪ್ಪನ ಮನೆಗೆ ಬಂದ ಗಂಡು ವಾಪಸ್ಸು ಹೋಗುವುದೆಂದು ತಿಳಿದ ಕಮಲಾವತಿ ತಮ್ಮ ಮನೆಯ ಮುಂದಿರುವ ಬಾವಿಯಿಂದ ನೀರನ್ನು ಸೇದುತ್ತಾ ನಿಲ್ಲುತ್ತಾಳೆ. ಆಗಲಾದರೂ ತನ್ನನ್ನು ನೋಡಿ ಆ ಗಂಡು ಒಪ್ಪಿ ತನ್ನನ್ನೇ ಮದುವೆ ಮಾಡುಕೊಳ್ಳಬಹುದೆಂದು ಭಾವಿಸುತ್ತಾಳೆ. ಇಲ್ಲಿ, ತನ್ನ ಅಸ್ಥಿತ್ವವನ್ನು ಸ್ಥಾಪಿಸಲು ಪ್ರಯತ್ನಿಸುತ್ತಾಳೆ. ಈ ರೀತಿಯಲ್ಲಿ ಅವಳಲ್ಲಿರುವ ಬಂಡಾಯ ಪ್ರಜ್ಞೆ ವ್ಯಕ್ತವಾಗಿದೆ.

ಅವಳಲ್ಲಿರುವ ಬಂಡಾಯ ವಯಸ್ಸಿನ ಮೂಲದ್ದು ಹೌದು, ಬೆಳೆಯುತ್ತಿರುವ 'ಸ್ವಪ್ರಜ್ಞೆ'ಯ ಮೂಲದ್ದು ಹೌದು. ಬದುಕು ಕೊಡದಿದ್ದರೆ ಅದರಿಂದ ಕಿತ್ತಾದರೂ ತಿನ್ನಬೇಕೆನ್ನುವ ತವಕ ಕಮಲಾವತಿಯಲ್ಲಿ ಕಾಣುತ್ತದೆ. ಚೈತನ್ಯದ ಈ ಹುಡುಗಿಯನ್ನು ಹಿಡಿಯುವುದೇ ಪುಟ್ಟಮ್ಮತ್ತೆಗೆ ಕಷ್ಟವಾಗಿಬಿಡುತ್ತದೆ. ಕಮಲಾವತಿಯ ವ್ಯಕ್ತಿತ್ವ ಅವಳಿಗೆ ಅರ್ಥವಾಗುವುದಿಲ್ಲವೆಂದಲ್ಲ. ಆದರೆ ಸಮಾಜ ಒಪ್ಪದ ಸಂಗತಿಗಳ ವಿರುದ್ಧ ಹೆಣ್ಣು ಹಂಬಲಿಸುವುದು ಬೇಡವೆಂದೇ ಅವಳ ಆಶಯ. ಬದುಕಿನ ಹೋರಾಟದಲ್ಲಿ ಪುಟ್ಟಮ್ಮತ್ತೆ ಸಮಾಜದ ನಿರ್ಬಂಧಗಳನ್ನು ಮೀರಲು ಹೆದರುತ್ತಾಳೆ.

ಆದರೆ ಮೊಮ್ಮಗಳಿಗೆ ಸಾಮಾಜಿಕ ನಿರ್ಬಂಧಗಳಾಗಲಿ, ನೈತಿಕ ನಿಯಮಗಳೆ ಆಗಲಿ, ಮೂರು ಕಾಸಿಗೂ ಬೇಡದವು. ಇವೆಲ್ಲ ವೈಯಕ್ತಿಕ ಬದುಕಿನ ಸುಖದ ಹುಡುಕಾಟದಲ್ಲಿ ಬರುವ ಅಡಚಣೆಗಳು ಎಂದೇ ಆಕೆಯ ಭಾವನೆ. ಅಂದರೇ ನಿರ್ದಿಷ್ಟ ಚೌಕಟ್ಟಿನೊಳಗೆ ಪುಟ್ಟಮ್ಮತ್ತೆ ತನ್ನನ್ನು ಕಟ್ಟಿಕೊಳ್ಳಲು ಪ್ರಯತ್ನಿಸಿದರೆ, ಮೊಮ್ಮಗಳು ಸಮಾಜಕ್ಕೆ ಸೆಡ್ಡು ಹೊಡೆದು ನಿಂತು ತನ್ನ ಸವಾಲನ್ನು ಘೋಷಿಸಬಲ್ಲವಳು. ಇಲ್ಲಿ ಇವರಿಬ್ಬರ ನಡುವೆ ಕೇವಲ 'ತಲೆಮಾರಿನ ಅಂತರ' ಮಾತ್ರವಲ್ಲ, ಪುರುಷ ಪ್ರಧಾನ ಸಮಾಜದ ಒತ್ತಡಗಳೂ ಕೆಲಸ ಮಾಡುತ್ತಿವೆ. ಕಮಲಾವತಿಯ ವ್ಯಕ್ತಿತ್ವವನ್ನು ಕುರಿತು ಪುಟ್ಟಮ್ಮತ್ತೆ ಅಷ್ಟು ಒದ್ದಾಡುವುದೇ ಅವಳ ಒಳಮನಸ್ಸಿಗೆ ತನ್ನ ಮೊಮ್ಮಗಳ ಮನಸ್ಸು ಅರ್ಥವಾಗಿರುವ ಸಂಕೇತ. ಕಮಲಾವತಿಯಲ್ಲಿ 'ಹೊಸ ಹೆಣ್ಣಿ'ನ ಉಗಮವೂ ಕಾಣಿಸುತ್ತದೆ. ಇಲ್ಲಿ ಕಮಲಾವತಿಯ ವ್ಯಕ್ತಿತ್ವ ಅತ್ಯಂತ ಸಹಜವಾಗಿ ಅರಳುತ್ತಾ ಹೋಗುತ್ತದೆ. ತನ್ನಿಂತಾನೆ ಮೂಡುವ ಇಂತಹ ಅರಿವಿನ ಬಗ್ಗೆ ವೈದೇಹಿಯವರಿಗೆ ತುಂಬಾ ಆಸಕ್ತಿ. ಇಂತಹ ಸ್ವಮೂಲವಾದ ಅರಿವು ಮಾತ್ರ ಅವರ ವ್ಯಕ್ತಿತ್ವವನ್ನು ಕೊನೆಯವರೆಗೂ ರೂಪಿಸುತ್ತದೆ ಎಂದು ವೈದೇಹಿ ಭಾವಿಸುತ್ತಾರೆ. ಇದು ಶೋಷಣೆ ಎಂದೋ, ತಪ್ಪೆಂದೋ ಸ್ವತಃ ಅವಳಿಗೆ ಅನ್ನಿಸಬೇಕು. ಅದರ ತೀವ್ರತೆಯಲ್ಲಿ ಹೊಸ ಹೆಣ್ಣು ಹುಟ್ಟುತ್ತಾಳೆ ಎಂಬುದು ಲೇಖಕಿಯ ಆಶಯ.

'ಪ್ರಶ್ನೆ' ಕತೆಯು ಹೆಣ್ಣಿನ ಅಂತರಂಗದಲ್ಲಿ ನಡೆಯುವ ತುಮುಲಗಳನ್ನು ಚಿತ್ರಿಸುವ ಕತೆಯಾಗಿದೆ. ಕತೆಯ ಪಾತ್ರಗಳಾದ ಅನು ಮತ್ತು ಭುವಿಯರ ಅಂತರಂಗದ ಭಾವನೆಗಳ ಅಭಿವ್ಯಕ್ತಿಯನ್ನು ಇಲ್ಲಿ ಕಾಣಬಹುದು. ತನ್ನ ಮನಸ್ಸಿನ ಭಾವನೆಗಳನ್ನು ವ್ಯಕ್ತಪಡಿಸದೇ ಇದ್ದ ಅನು ಭಾಷಣಕಾರನೊಡನೆ ಹೋಗಲು ಸಿದ್ಧಳಾಗುತ್ತಾಳೆ.

ಭಾಷಣಕಾರನ ಆಕರ್ಷಕ ವ್ಯಕ್ತಿತ್ವ ಮತ್ತು ಅವನ ಮಾತುಗಾರಿಕೆಯಿಂದ ಇಬ್ಬರು ಪ್ರಭಾವಿತರಾಗುತ್ತಾರೆ. ಅವನನ್ನು 'ನಿಮ್ಮೊಡನೆ ಒಂದು ರಾತ್ರಿ ಏಕಾಂಗಿಯಾಗಿ ಕಳೆಯುವ ಆಸೆ ಇದೆ. ಏನು ಹೇಳುತ್ತೀರಿ'? – ಎಂತ ಬರೆದಿದ್ದೀಯಲ್ಲ, ನಿನಗೆ ಯಾವ ಧೈರ್ಯ ಅವ ನಿನಗೆ ಏನೂ ಮಾಡಲಿಕ್ಕಿಲ್ಲ ಎಂತ ?' 'ಯಾರು ಹೇಳಿದರು ಹಾಗೆಂತ ? ಅವ ಏನೂ ಮಾಡಬಹುದು, ನಾನದಕ್ಕೆ ರೆಡಿಯೇ. ಇದನ್ನು ಸಭೆ ಮುಂದೆ ಓದಿ ಹೇಳದಿದ್ದರೆ ಸಾಕು'[8] ಎಂದು ಭುವಿ ಹೇಳುತ್ತಾಳೆ. ಹೆಣ್ಣಿನ ಅಂತರಂಗದ ಭಾವನೆಗೂ ಮತ್ತು ಬಾಹ್ಯ ವರ್ತನೆಗೂ ಇರುವ ಅಂತರವನ್ನು ಲೇಖಕಿ ಇಲ್ಲಿ ಗುರುತಿಸಿದ್ದಾರೆ. ಹೆಣ್ಣಿನ ಮಾನಸಿಕ ಸಂಘರ್ಷವನ್ನು, ಅವಳ ತೊಳಲಾಟವನ್ನು ಈ ಕತೆಯಲ್ಲಿ ಕಾಣಬಹುದಾಗಿದೆ.

**'ಆತ'** ಕತೆಯ ನಾಯಕಿ ಸುಮನ ಮದುವೆಯಾಗಿ ತನ್ನ ಗಂಡ ಮನೀಷನೊಡನೆ ಬಸ್ಸಿನಲ್ಲಿ ಹೊರಟಿದ್ದಾಳೆ. ಅವನು ಸೀಟಿನ ಮೇಲೆ ಕರವಸ್ತ್ರ ಇಟ್ಟು ಸಿಗರೇಟು ತರಲು ಹೋಗುತ್ತಾನೆ. ಸುಮನ ಬಸ್ಸಿನಿಂದ ಹೊರಗೆ ನೋಡುತ್ತ ಕುಳಿತಿರುತ್ತಾಳೆ. ಆಗ ಯಾರೋ ಒಬ್ಬ ತನ್ನನ್ನೇ ದಿಟ್ಟಿಸಿ ನೋಡುವುದು ಕಾಣಿಸುತ್ತದೆ. ಅದನ್ನು ಕಂಡ ಅವಳಿಗೆ ಒಮ್ಮೆ ಹೇಸಿಗೆ ಎನಿಸಿದರೆ ಮತ್ತೊಮ್ಮೆ ಸಿಟ್ಟು ಬರುತ್ತಿತ್ತು. ಅದೇ ಸಂದರ್ಭದಲ್ಲಿ ಒಂದು ಬಗೆಯ ಖುಷಿಯೂ ಆಗುತ್ತದೆ. ತನ್ನ ಜೀವನದಲ್ಲಿ ಬಂದು ಹೋದ ಗಂಡಿಸರ ಚಿತ್ರ ಒಮ್ಮೆ ಮನದೊಳಗೆ ಮೂಡುತ್ತದೆ. ಎಲ್ಲರು ತನ್ನ ಮನಸ್ಸನ್ನು ಕ್ಷಣಕಾಲವಾದರೂ ಕದಲಿಸಿದವರೇ ಹೊರತು ಜೀವನದುದ್ದಕ್ಕೂ ಜೊತೆಯಾಗಿ ಬರುವ ಭರವಸೆಯನ್ನು ನೀಡಿದವರು ಅಲ್ಲ ನೇರವಾಗಿ ಅವಳೊಡನೆ ಮಾತನಾಡಿಯು ಇರುವುದಿಲ್ಲ ಆದರೂ ಕೂಡ ಅವರೆಲ್ಲರೂ ಪದೇ ಪದೇ ಏಕೆ ನೆನಪಾಗುತ್ತಾರೆ ಎಂದು ಯೋಚಿಸುತ್ತಾಳೆ ತನ್ನೊಳಗೆ ವಿಮರ್ಶೆ ಮಾಡಿಕೊಳ್ಳುತ್ತ ತನ್ನ ಅಸ್ತಿತ್ವವನ್ನು ಹುಡುಕುವ ಪ್ರಯತ್ನವನ್ನು ಅವಳು ನಡೆಸುತ್ತಾಳೆ.

**'ಮರೆಯಾದವರು'** ಕತೆಯಲ್ಲಿ ನಾಯಕಿಯ ಸ್ವ ವಿಮರ್ಶೆ ಮತ್ತು ತನ್ನ ಬಾಲ್ಯದಿಂದಲೂ ತನ್ನೊಳಗೆ ಮೂಡಿಬಂದ ಗಂಡಸರ ವಿಮರ್ಶೆ ಇದೆ. ಅವರ ಬಗ್ಗೆ ತನಗೆ ಯಾವ ಭಾವನೆಯಿತ್ತೆಂದು, ಆ ರೀತಿಯ ಭಾವನೆಗಳು ಬೆಳೆಯಲು ಕಾರಣವೇನು? ಎಂಬುದನ್ನು ಯೋಚಿಸುತ್ತಾಳೆ. ಬಾಲ್ಯದಲ್ಲಿ ತನಗೆ ಪಾಠ ಮಾಡುತ್ತಿದ್ದ ಮಾಸ್ಟರು, ಹಾರ್ಮೋನಿಯಂ ಮಾಸ್ಟರು, ಒಮ್ಮೆ ಬಸ್ಸಿನಲ್ಲಿ ಸಿಕ್ಕಿದವನು– ಹೀಗೆ ಹಲವು ಗಂಡಸರ ಬಗ್ಗೆ ತನ್ನೊಳಗೆ ಮೂಡಿದ್ದು ಎಂಥ ಭಾವನೆಗಳು ಎಂಬ ಪ್ರಶ್ನೆ ಅವಳನ್ನು ಕಾಡುತ್ತದೆ. ಹೆಣ್ಣೊಬ್ಬಳ ಭಾವನೆಗಳ ಸಂಘರ್ಷದ ಚಿತ್ರಣ ಈ ಕತೆಯಲ್ಲಿದೆ. ಈ ಕಥಾನಾಯಕಿಯ ಜೀವನದಲ್ಲಿ ಬಂದ ಗಂಡಸರ ವರ್ತನೆ, ಅದಕ್ಕೆ ಈಕೆ ಪ್ರತಿಕ್ರಿಯಿಸಿದ ರೀತಿ, ಗಂಡು–ಹೆಣ್ಣುಗಳ ನಡುವಿನ ವೈರುಧ್ಯಗಳನ್ನು ಈ ಕತೆ ವಿಶ್ಲೇಷಿಸುತ್ತದೆ. ತನ್ನವನೂ ಎಂದುಕೊಂಡ ಗಂಡಸಿನೊಡನೆ ಒಮ್ಮೆ ಮಾತನಾಡುತ್ತಿರುವಾಗ ಅವನು ಕೇಳುತ್ತಾನೆ "ನೀನು ಬೇರೆ ಯಾರನ್ನೂ ಪ್ರೀತಿಸಿಲ್ಲವಾ?" ಎಂದು ಅದಕ್ಕೆ ಅವಳು ಇಲ್ಲವೆನ್ನುತ್ತಾಳೆ. ಅವನು ಹೋದ ಮೇಲೆ ತನ್ನ ಮನಸ್ಸಿನಲ್ಲಿ ಹೀಗೆ ಹೇಳಿಕೊಳ್ಳುತ್ತಾಳೆ. " ಎಲವೋ, ಗಂಡಸರು ಮಲಗುವಷ್ಟು ಸುಲಭವಾಗಿ ಹೆಂಗಸರು ಮಲಗುವುದಿಲ್ಲ ತಿಳಕೊ. ಅವರ ಆಯ್ಕೆ ಬಹಳ ಸೂಕ್ಷ್ಮವಾದದ್ದು. ಜಾಗರೂಕತೆಯದು. ಎಷ್ಟೆಂದರೆ ಆಯ್ಕೆ ಮುಗಿಯುವಾಗ ಅವರ ಆಯುಷ್ಯವೇ ಅರ್ಧ ಮುಗಿಯುತ್ತದೆ. ಅದಕ್ಕೇ ಬಹುಶಃ ಅವರಿಗೆ ಆಯ್ಕೆಯ ಅವಕಾಶವನ್ನೇ ಕತ್ತರಿಸಿ ಹಾಕಿರುವುದು"[10] ಹೀಗೆ ಯೋಚಿಸುವ ಕತಾನಾಯಕಿ ಅದರಲ್ಲೇ ತನ್ನ ಸ್ವಂತಿಕೆಯ ಹುಡುಕಾಟ ನಡೆಸುವುದನ್ನು ಈ ಕತೆಯಲ್ಲಿ ಕಾಣಬಹುದಾಗಿದೆ. ಇಲ್ಲಿ ಕಥಾನಾಯಕಿಯ ಗಂಡ ಕೇಳುವ ಪ್ರಶ್ನೆಗಳು ಹೆಣ್ಣಿನ ಮೇಲೆ ಗಂಡಿಗಿರುವ ಸಹಜ

ಅನುಮಾನಗಳು, ಆಕೆಯ ಲೈಂಗಿಕ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವ ಹಾಗೂ ಸ್ತ್ರೀಯನ್ನು ಪಾವಿತ್ರ್ಯದಲ್ಲಿ ಬಂಧಿಸುವ ಗಂಡಿನ ಹುನ್ನಾರಗಳನ್ನು ಸೂಚಿಸುತ್ತವೆ.

ಇಲ್ಲಿ ಕಥಾನಾಯಕಿಗೆ ಹೆಣ್ಣಿಗೂ ಆಯ್ಕೆಯ ಸ್ವತಂತ್ರ ಇರಬೇಕು. ಆಗ ಮಾತ್ರ ತಮಗೆ ಸೂಕ್ತವಾದವರನ್ನು ಆರಿಸಿ ಬದುಕನ್ನು ಸುಂದರಗೊಳಿಸಿಕೊಳ್ಳಲು ಸಾಧ್ಯ ಎಂಬ ಅಭಿಪ್ರಾಯವಾಗಿದೆ. ಜೊತೆಗೆ ಹೆಣ್ಣು ಆಯ್ಕೆಯಲ್ಲಿ ಹಲವು ಮಾನದಂಡಗಳನ್ನು ಬಳಸುತ್ತಾಳೆ. ಇದನ್ನೇ ಅಸ್ತ್ರವಾಗಿ ಬಳಸಿದ ಪುರುಷ ರೂಪಿ ಸಮಾಜ ಅವಳ ಆಯ್ಕೆಯ ಸ್ವಾತಂತ್ರ್ಯವನ್ನೇ ಕಿತ್ತುಕೊಂಡು ತನಗೆ ಬೇಕಾದ ರೀತಿಯಲ್ಲಿ ರೂಪಿಸಿಕೊಳ್ಳುವ ಹುನ್ನಾರ ನಡೆಸಿದೆ. ಹೆಣ್ಣಿನ ಸಹಜ ಗುಣಗಳನ್ನು ದೌರ್ಬಲ್ಯವಾಗಿ ನೋಡುವ ಸಮಾಜದ ಚಿತ್ರಣವನ್ನು ಲೇಖಕಿ ಅನಾವರಣ ಮಾಡಲು ಪ್ರಯತ್ನಿಸಿದ್ದಾರೆ. ಪಿತೃ ಪ್ರಧಾನ ವ್ಯವಸ್ಥೆಯು ಮಹಿಳೆಗೆ ನಿರ್ಮಿಸಿರುವ ಭಿನ್ನ ಲಿಂಗೀಯ ಸಂಬಂಧ ಹಾಗೂ ಭಾವನಾತ್ಮಕ ಸಂಬಂಧಗಳ ನಿರ್ಬಂಧಗಳಿಂದ ಮುಕ್ತವಾಗಿಸುವಲ್ಲಿ ವೈದೇಹಿಯವರು ದಿಟ್ಟ ಹೆಜ್ಜೆ ಇಟ್ಟಿರುವುದು ಈ ಕತೆಗಳಲ್ಲಿ ವ್ಯಕ್ತವಾಗುತ್ತದೆ.

ಎಲ್ಲಾ ಧರ್ಮಗಳಲ್ಲಿನ ಸ್ತ್ರೀಯರು ಸಾಮಾಜಿಕ ಸ್ಥಾನಮಾನ, ಆರ್ಥಿಕ ಸ್ವಾವಲಂಬನೆ, ಆಯ್ಕೆಯ ಸ್ವಾತಂತ್ರ್ಯ ಮುಂತಾದ ವಿಚಾರಗಳಲ್ಲಿ ತಾರತಮ್ಯಕ್ಕೊಳಗಾಗಿದ್ದಾರೆ ಎಂಬುದಕ್ಕೆ ವೈದೇಹಿಯವರ ಸಬಿತಾ ಕಥೆ ಉತ್ತಮ ನಿದರ್ಶನವಾಗಿದೆ. **'ಸಬಿತಾ'** ಕತೆಯಲ್ಲಿ ಮಧ್ಯಮ ವರ್ಗದ ಹೆಣ್ಣಾದರೂ ಸಬಿತಾ ಇದ್ದುದ್ದರಲ್ಲೇ ತೃಪ್ತಿಪಟ್ಟುಕೊಳ್ಳುತ್ತಾಳೆ. ತನ್ನ ದಿನನಿತ್ಯದ ಗಡಿಬಿಡಿಯ ಕೆಲಸಗಳೊಂದಿಗೆ ಕನಸನ್ನು ಹೆಣೆಯುತ್ತ, ಜೀವನೋತ್ಸಾಹ ತುಂಬಿಕೊಳ್ಳುತ್ತಾ ಬದುಕನ್ನು ಸಹ್ಯವಾಗಿಸಿಕೊಳ್ಳುತ್ತಾಳೆ. ಇವಳ ಪಕ್ಕದ ಮನೆಯ ಹೆಂಗಸು ಆರ್ಥಿಕವಾಗಿ, ಸಾಮಾಜಿಕವಾಗಿ ಎಲ್ಲದರಲ್ಲೂ ಪ್ರಬಲಳಿದ್ದರೂ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇಲ್ಲಿ ಅವಳು ತನ್ನ ಮಾನಸಿಕ ತುಮುಲಗಳನ್ನು, ಭಾವನೆಗಳನ್ನು ಯಾರೊಂದಿಗೂ ಹಂಚಿಕೊಳ್ಳದೇ ಅಂತರಂಗದ ಬೇಗುದಿಗಳಿಗೆ ಒಳಗಾಗಿ ಅವಳು ಜೀವನವನ್ನೇ ಕಳೆದುಕೊಳ್ಳುತ್ತಾಳೆ. ಆದರೆ ಸಬಿತಾ ಸಾಮಾಜಿಕರೊಂದಿಗೆ ಬೆರೆತು ಜೀವಪರತೆಯ ಕಡೆಗೆ ತುಡಿಯುತ್ತ ಇದ್ದುದರಲ್ಲೇ ಸಮಾಧಾನ ಪಡುವುದನ್ನು ರೂಢಿಸಿಕೊಳ್ಳುತ್ತಾಳೆ. ಬೇರೆಯವರ ಬದುಕಿನ ತಲ್ಲಣಗಳನ್ನು ತಿಳಿದು ತನ್ನ ಬದುಕಿನಲ್ಲಿ ಎದುರಾಗಬಹುದಾದ ಸಮಸ್ಯೆಗಳನ್ನು ಎದುರಿಸಲು ಸಿದ್ಧವಾಗುತ್ತಾಳೆ. ಒಟ್ಟಿನಲ್ಲಿ ಪಿತೃಪ್ರಧಾನತೆಯು ತನ್ನ ಅನುಕೂಲಕ್ಕಾಗಿ ಸ್ತ್ರೀ ಪುರುಷರ ಲೈಂಗಿಕ ಚಟುವಟಿಕೆಗಳ ಬಗ್ಗೆ ಹಲವಾರು 'ಮಿಥ್' ಗಳನ್ನು ರೂಪಿಸಿ, ಅವುಗಳನ್ನು ಸಾಮಾಜೀಕರಣಗೊಳಿಸುವ ಮೂಲಕ ಸ್ತ್ರೀ ದೇಹದ ಮೇಲೆ ತನ್ನ ಹತೋಟಿಯನ್ನು ನಿರಂತರವಾಗಿ ಉಳಿಸಿಕೊಳ್ಳಲು ಪ್ರಯತ್ನಿಸಿರುವುದನ್ನು ಇಲ್ಲಿಯ ಕತೆಗಳಲ್ಲಿ ಪ್ರಶ್ನಿಸಲಾಗಿದೆ.

ವೈದೇಹಿಯವರು ತಮ್ಮ ಸ್ತ್ರೀತ್ವದ ಚಿತ್ರಣಗಳಲ್ಲಿ ತಮ್ಮದೇ ಆದ ನೋಟದ ವಿಭಿನ್ನ ಮಾದರಿಗಳನ್ನು ಸೃಷ್ಟಿಸಿದ್ದಾರೆ. ಹೆಣ್ಣು–ಹೆಣ್ಣು ಸಂಬಂಧದಲ್ಲಿನ ಹಾಗೂ ಗಂಡು–ಹೆಣ್ಣಿನ ಸಂಬಂಧದಲ್ಲಿನ ರಾಜಕಾರಣ, ಪುರುಷ ಸಮಾಜದ ವಿರುದ್ಧದ ಬಂಡುಗಾರಿಕೆ ಹಾಗೂ ಹೊಸ ಪ್ರಜ್ಞಾ ಸಾಧ್ಯತೆಗಳನ್ನು ಅವರ ಕತೆಗಳಲ್ಲಿ ದಾಖಲಿಸುತ್ತವೆ. ಹೆಚ್ಚಿನ ನೆಲೆಯಿಂದ ಪುರಾಣ ಹಾಗೂ ಚರಿತ್ರೆಯ ಮರುಶೋಧನೆಗೆ ಯತ್ನಿಸಿದ್ದಾರೆ. ವ್ಯವಸ್ಥೆಯನ್ನು ಪ್ರಶ್ನಿಸುವ ಹಾಗೂ ಹಟಮಾರಿತನದಲ್ಲಿ ಎಲ್ಲವನ್ನು ಪಡೆದುಕೊಳ್ಳಬೇಕೆನ್ನುವ ನೈತಿಕ ಹೊಣೆಗಾರಿಕೆ, ಸ್ತ್ರೀ ಸ್ವಾತಂತ್ರ್ಯದ ಮಾದರಿಗಳು ಇವರ ಕತೆಗಳಲ್ಲಿ ಚಿತ್ರಿತಗೊಂಡಿವೆ. ಹೆಣ್ಣಿನ ವೈಯಕ್ತಿಕ ಸೆಣಸಾಟ ಒಂದು ರೀತಿಯ ಸ್ವಾತಂತ್ರ್ಯ,

**ಅಡಿಟಿಪ್ಪಣಿ :-**

೧. ಅಲೆಗಳಲ್ಲಿ ಅಂತರಂಗ, ವೈದೇಹಿಯವರ ಸಮಗ್ರ ಕತೆಗಳ ಸಂಕಲನ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ, ೨೦೦೬, ಪುಟ – ೨೨೩

೨. ಅದೇ, ಪುಟ – ೨೨೩

೩. ಚಹರೆ, ಡಾ.ಎಚ್.ಎಸ್. ಶ್ರೀಮತಿ, ಇಳಾ ಪ್ರಕಾಶನ, ಬೆಂಗಳೂರು, ೧೯೯೯, ಪುಟ – ೭೭

೪. ಅಲೆಗಳಲ್ಲಿ ಅಂತರಂಗ, ವೈದೇಹಿಯವರ ಸಮಗ್ರ ಕತೆಗಳ ಸಂಕಲನ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ, ೨೦೦೬, ಪುಟ – ೨೨೬

೫. ಅಲೆಗಳಲ್ಲಿ ಅಂತರಂಗ, ವೈದೇಹಿಯವರ ಸಮಗ್ರ ಕತೆಗಳ ಸಂಕಲನ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ, ೨೦೦೬, ಪುಟ – ೨೮೧

೬. ಸ್ತ್ರೀಮತವನುತ್ತರಿಸಲಾಗದೆ? ಸಾಹಿತ್ಯ ಸಂಸ್ಕೃತಿ ಕುರಿತ ಲೇಖನಗಳು, ಎಂ. ಎಸ್. ಆಶಾದೇವಿ, ಅಕ್ಷರ ಪ್ರಕಾಶನ, ಸಾಗರ, ಕರ್ನಾಟಕ, ೨೦೦೬, ಪುಟ – ೭೫

೭. ಅದೇ, ಪುಟ – ೨೭೬

೮. ಅದೇ, ಪುಟ – ೨೭೬

೯. ಅದೇ, ಪುಟ – ೬೩೦

೧೦. ಅದೇ, ಪುಟ – ೫೩೩

*********

# ೩. ಸಾಮಾಜಿಕ ನೆಲೆ

ಸಮಕಾಲೀನ ಸಾಮಾಜಿಕ ಚಿಂತನೆಗಳಲ್ಲಿ ಹೆಣ್ಣಿನ ಪರಿಸ್ಥಿತಿಯನ್ನು ಕುರಿತಂತೆ ವರ್ಗ,ಜಾತಿ, ಪುರೋಹಿತಶಾಹಿ, ಆಧುನಿಕತೆ, ಕುಟುಂಬ, ವಿವಾಹ ಮೊದಲಾದ ಸಂಗತಿಗಳು ತುಂಬಾ ಗಂಭೀರವಾದ ಸಮಸ್ಯೆಗಳನ್ನು ಹುಟ್ಟುಹಾಕುವ ಅಧಿಕಾರ ಕೇಂದ್ರಗಳಾಗಿವೆ. ಇವುಗಳು ಉತ್ಪಾದನೆ, ಸಂತಾನ, ಸಾಮಾಜಿಕತೆ, ನೈತಿಕತೆ, ಲೈಂಗಿಕತೆ, ಸ್ವಂತಿಕೆ ಮೊದಲಾದವುಗಳಿಂದ ಕೂಡಿದ ಹೆಣ್ಣಿನ ಪರಿಸ್ಥಿತಿಯನ್ನು ನಿಯಂತ್ರಿಸುತ್ತ ಬಂದಿವೆ. ಆರ್ಥಿಕತೆ, ವಿವಾಹ, ಸಂತಾನ, ಲೈಂಗಿಕ ಕಾರಣಗಳು ಹೆಣ್ಣಿನ ದೌರ್ಬಲ್ಯಗಳಾಗಿ ಅವುಗಳನ್ನು ಕಾಡಿವೆ. ಇವುಗಳನ್ನು ಶೋಧಿಸಿ, ಸ್ತ್ರೀಸ್ವಾತಂತ್ರ್ಯ, ವಿಮೋಚನೆ, ಸಮಾನತೆಯ ಅವಶ್ಯಗಳನ್ನು ಗುರುತಿಸಿ ಅದಕ್ಕೊಂದು ಸೈದ್ಧಾಂತಿಕ ಪರಿಹಾರವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಅನೇಕ ಸ್ತ್ರೀವಾದಿ ಚಿಂತಕರು ವಿಚಾರಗಳನ್ನು ಮಂಡಿಸುತ್ತ ಬಂದಿದ್ದಾರೆ. ಈ ಸಮಸ್ಯೆಯ ಚಿಂತನೆಗಳು ಒಂದು ಸೈದ್ಧಾಂತಿಕ ರೂಪವನ್ನು ಪಡೆಯುವಷ್ಟು ಪ್ರಬಲವಾಗಿ ಬೆಳೆಯದಿರಲು ಕಾರಣವೇನು? ಅವು ಕ್ರಿಯಾಶೀಲ ಚಟುವಟಿಕೆಗಳಾಗಿ ರೂಪುಗೊಳ್ಳಲು ಇರುವ ಅಡೆತಡೆಗಳೇನು? ಎಂಬ ಪ್ರಶ್ನೆಗಳನ್ನು ಎತ್ತಿಕೊಂಡು ತಮ್ಮ ಬರಹಗಳ ಮೂಲಕ ಕಾರ್ಯಗತ ಗೊಳಿಸುವ ಪ್ರಯತ್ನವನ್ನು ವೈದೇಹಿ, ಸಾರಾ ಅಬೂಬಕರ್, ಪ್ರತಿಮಾ ಕುಮಾರ್ ಮೊದಲಾದವರು ಮಾಡಿದ್ದಾರೆ.

ವೈದೇಹಿಯವರು ಸಮಾಜದ ಮೂಲಭೂತ ಅಂಗವಾದ ಕುಟುಂಬಗಳ ಕುರಿತಂತೆ ಹಲವಾರು ಪ್ರಶ್ನೆಗಳನ್ನು ತಮ್ಮ ಕತೆಗಳ ಮೂಲಕ ಎತ್ತಿದ್ದಾರೆ. ಕುಟುಂಬವು ಸ್ತ್ರೀಯರಿಗೆ ಎಷ್ಟರ ಮಟ್ಟಿಗೆ ಸುರಕ್ಷತೆಯನ್ನು ಒದಗಿಸುವ, ಸ್ತ್ರೀಯರನ್ನು ಗೌರವಿಸುವ ಸಂಸ್ಥೆಯೇ ಎಂಬುದರ ಪರಿಶೀಲನೆಗೆ ತೊಡಗಿದ್ದಾರೆ. ಲಿಂಗ ತಾರತಮ್ಯದ ಬಾಲಪಾಠಗಳು ಕುಟುಂಬದಲ್ಲೇ ಹೇಗೆ ನಡೆಯುತ್ತವೆ. ಮಹಿಳೆಯ ಮೇಲಾಗುವ ದೌರ್ಜನ್ಯಗಳಲ್ಲಿ ಹೆಚ್ಚಿನ ಪಾಲು ಕುಟುಂಬದ ವ್ಯಾಪ್ತಿಯಲ್ಲಿ ಎಷ್ಟರ ಮಟ್ಟಿನದ್ದಾಗಿದೆ. ಕುಟುಂಬದೊಳಗಿನ ಸ್ತ್ರೀಯರ ವೈಯಕ್ತಿಕ ಪ್ರಶ್ನೆಗಳು ಹೇಗೆ ಸಾಮಾಜಿಕ ಪ್ರಶ್ನೆಗಳೂ ಆಗಿರುತ್ತವೆ. ತವರಿನಲ್ಲಿ ಗಂಡನ ಮನೆಯಲ್ಲಿ ಸ್ತ್ರೀ ಎದುರಿಸುವ ಲಿಂಗತಾರತಮ್ಯ ಹಾಗೂ ಲೈಂಗಿಕ ಹಿಂಸೆಗಳ ಸ್ವರೂಪ- ಇವೇ ಮೊದಲಾದ ವಸ್ತುಸ್ಥಿತಿಗಳನ್ನು ವೈದೇಹಿಯವರ ಕತೆಗಳ ಹಿನ್ನೆಲೆಯಲ್ಲಿ ಈ ಅಧ್ಯಾಯದಲ್ಲಿ ಪರಿಶೀಲಿಸಬಹುದಾಗಿದೆ.

ವೈದೇಹಿಯವರ ಕತೆಗಳಲ್ಲಿ ಸ್ವಪ್ರಜ್ಞೆಯ ಹೊಸ ಹೆಣ್ಣಿನ ಬಿಕ್ಕಟ್ಟುಗಳ, ವ್ಯವಸ್ಥೆಯ ಕ್ರೌರ್ಯಗಳ ಹಾಗೂ ಅದರೆಲ್ಲಾ ಸೂಕ್ಷ್ಮಗಳ ಗ್ರಹಿಕೆಯ ಸಾಮಾಜಿಕ ಚಿತ್ರಣವಿದೆ. ಆಧುನಿಕತೆಯ ಹಿನ್ನೆಲೆಯಲ್ಲಿ ಬದಲಾಗುವ ಸಾಮಾಜಿಕ ಶೋಷಣೆಯ ಕಲಾತ್ಮಕ ಮಾದರಿಗಳನ್ನು ಇಲ್ಲಿ ಗುರುತಿಸಬಹುದಾಗಿದೆ. ಮದುವೆ, ಕುಟುಂಬಗಳಂಥ ಸಾಂಸ್ಥಿಕ ವ್ಯವಸ್ಥೆಗಳ ನಿಯಂತ್ರಣಗಳನ್ನು ತುಂಬ ಸೂಕ್ಷ್ಮವಾಗಿ ಪರಿಶೀಲಿಸಿದ್ದಾರೆ. ಲಿಂಗ ಅಸಮಾನತೆಯ ಪ್ರಶ್ನೆಗಳನ್ನು ಪ್ರಬುದ್ಧವಾಗಿ ನಿರ್ವಹಿಸುತ್ತಾರೆ. ಹೆಣ್ಣಿನ ದೃಷ್ಟಿಕೋನದಿಂದ ಬದುಕನ್ನು ನೋಡುವ, ಪರಿಶೀಲಿಸುವ ಸ್ತ್ರೀವಾದಿ ಧೋರಣೆಗಳನ್ನು ಸೂಕ್ಷ್ಮ ನೆಲೆಯಲ್ಲಿ ಪರಿಶೀಲಿಸಿದ್ದಾರೆ.

ವೈದೇಹಿಯವರ ಕತೆಗಳ ಕೇಂದ್ರ ಬಿಂದು ಹೆಣ್ಣು. ಈ ಹೆಣ್ಣು ವಿವಿಧ ಜಾತಿ, ವಯಸ್ಸು, ಅಂತಸ್ತು, ಸಂವೇದನೆಗಳಲ್ಲಿ ಕಾಣಿಸಿಕೊಳ್ಳುತ್ತಾಳೆ. ತೀರಾ ಸಂಪ್ರದಾಯಸ್ಥರಿಂದ ತೀರ ಆಧುನಿಕರವರೆಗೆ, ಅವಿವಾಹಿತೆಯರಿಂದ ವಿಧವೆಯವರೆಗೆ, ಗೃಹಿಣಿಯರಿಂದ ವೇಶ್ಯೆಯವರೆಗೆ ಈ ಪ್ರಪಂಚ ಹರಡಿಕೊಳ್ಳುತ್ತದೆ. ಇಲ್ಲಿ ವಿದ್ಯಾವಂತರು, ಅವಿದ್ಯಾವಂತರು, ಕಳ್ಳರು, ಸುಚ್ಚರು, ಶೋಷಿಸುವವರು, ಶೋಷಣೆಗೆ ಒಳಗಾದವರು ಇದ್ದಾರೆ. ಹೆಣ್ಣು ಒಂದು

ಸಿದ್ಧ ಮಾದರಿಯಲ್ಲಿ ಕಾಣಿಸಿಕೊಳ್ಳದೆ ವಿವಿಧ ಆಕೃತಿಗಳಲ್ಲಿ ಇಲ್ಲಿ ಕಾಣಿಸಿಕೊಳ್ಳುತ್ತಾಳೆ.

ವೈದೇಹಿಯವರು ತಮ್ಮ ಕತೆಗಳಲ್ಲಿ ಹೆಣ್ಣು ಜಗತ್ತಿನ ದೈನಂದಿನ ಬದುಕಿನ ಸೂಕ್ಷ್ಮ ವಿವರಗಳನ್ನು ತೆರೆದಿಡುತ್ತಾರೆ. ಜೊತೆಗೆ ಹಲವು ತಲೆಮಾರುಗಳ ಹೆಂಗಸರ ತಳಮಳಗಳನ್ನು ಚಿತ್ರಿಸುತ್ತಲೇ ಬದಲಾಗುತ್ತಿರುವ ಸಾಮಾಜಿಕ ವಿನ್ಯಾಸದ ಸೂಕ್ಷ್ಮಗಳನ್ನು ಓದುಗರ ಎದುರಿಗಿಡುತ್ತಾರೆ. ಅಧಿಕಾರ ಸಂಬಂಧಗಳ ಮೇಲೆ ಮತ್ತು ಲಿಂಗಭೇದ ಸಂಬಂಧಗಳ ಮೇಲೆ ಸಾಮಾಜಿಕ ಅರ್ಥಕಲ್ಪನೆಯು ಹೇಗೆ ಕಟ್ಟಲ್ಪಟ್ಟಿದೆ ಎನ್ನುವುದರ ಬಗೆಗೆ ವೈದೇಹಿಯವರು ಹೆಚ್ಚು ಒತ್ತುಕೊಟ್ಟಿದ್ದಾರೆ. ಉದಾಹರಣೆಗೆ 'ಅವಲಂಬಿತರು' ಕತೆಯನ್ನು ನೋಡಬಹುದಾಗಿದೆ. 'ಅಹಲ್ಯೆ' ಮಗುವಾಡಿಸಲೆಂದು ಬಂದ ಚಿಕ್ಕ ಹುಡುಗಿ. ಕಣ್ಣು ತುಂಬಾ ಕನಸು, ಹಲವು ಬಯಕೆಗಳನ್ನು ಹೊತ್ತಿದ್ದರೂ ಆರ್ಥಿಕವಾಗಿ ಸಬಲಳಲ್ಲದ ಕಾರಣ ಮತ್ತೊಬ್ಬರನ್ನು ಅವಲಂಬಿಸಬೇಕಾದ ಪರಿಸ್ಥಿತಿ ಆಕೆಯದು. ಯಾವ ಸಂದರ್ಭದಲ್ಲೂ ಎದೆಗುಂದದೆ ಎಲ್ಲಾ ಕೆಲಸವನ್ನು ಅಚ್ಚುಕಟ್ಟಾಗಿ ಮಾಡುವವಳು. ತಾಯಂದಿರು ಮಗುವನ್ನು ಸಾಕುವ ರೀತಿಯಂತೆ ಈ ಹುಡುಗಿಯು ಸಾಕುತ್ತಿದ್ದಳು. ಮಗುವಿನ ಲಾಲನೆ ಪಾಲನೆಯೊಂದಿಗೆ ಮನೆಗೆಲಸವನ್ನು ಮನೆಯ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತಿದ್ದಳು. ಇವಳ ತಾಯಿ ಸೂಚಮ್ಮ ಆರ್ಥಿಕವಾಗಿ ಸಬಲಳಲ್ಲ. ಸಾಂಪ್ರದಾಯಿಕ ಮನಸ್ಥಿತಿಯವಳು, ಸಮಾಜಕ್ಕೆ ಹೆದರುವವಳು. ಆದ ಕಾರಣ ತನ್ನ ಮಗಳು ಮೈನೆರೆಯದೆ ಇರುವ ಬಗ್ಗೆ ಆತಂಕಿತಳಾಗುತ್ತಾಳೆ. ಅದಕ್ಕಾಗಿಯೇ ತನಗೆ ಪರಿಚಯವಿರುವ ಆರ್ಥಿಕವಾಗಿ ಪ್ರಬಲವಾಗಿರುವ ಶಾರದೆಯ ಮನೆಗೆ ಕಳುಹಿಸುತ್ತಾಳೆ ಡಾಕ್ಟರಿಗೆ ತೋರಿಸಬೇಕೆಂದು ಹೇಳಿ. ಹೆಣ್ಣಿನಿಂದಲೇ ಹೆಣ್ಣಿನ ಶೋಷಣೆ ನಡೆಯುತ್ತದೆ. ಶಾರದೆಯು ತನ್ನ ಹಾಗೆಯೆ ಅಹಲ್ಯೆಗೂ ಭಾವನೆಗಳಿವೆ, ಆಸೆ ಕನಸುಗಳಿವೆ. ಅವುಗಳನ್ನು ಪೂರೈಸಬೇಕು ಎಂಬುದನ್ನು ಯೋಚಿಸುವುದಿಲ್ಲ. ತನ್ನ ಸ್ವಾರ್ಥಕ್ಕಾಗಿ ಬಳಸಿಕೊಂಡು ಕೊನೆಗೆ ಅವಮಾನ ಮಾಡಿ ಕಳುಹಿಸುತ್ತಾಳೆ. ದುರ್ಬಲರು, ಆರ್ಥಿಕವಾಗಿ ಹಿಂದುಳಿದವರು, ಹೆಣ್ಣೇ ಆಗಲಿ ಗಂಡೇ ಆಗಲಿ ಸಮಾಜ ಅವರನ್ನು ಶೋಷಿಸುತ್ತದೆ. ತನಗೆ ಬೇಕಾದ ಹಾಗೆ ನಡೆಸಿಕೊಳ್ಳುತ್ತದೆ. ಅವರ ಯಾವ ಭಾವನೆಗಳನ್ನು ಲೆಕ್ಕಿಸದೆ ಅವಮಾನ ಮಾಡಿ ಶೋಷಣೆಗೆ ಒಳಪಡಿಸುತ್ತದೆ ಎಂಬುದನ್ನು ಈ ಕತೆಯಲ್ಲಿ ಚಿತ್ರಿತವಾದ ಪಾತ್ರಗಳ ಮೂಲಕ ಕಂಡುಕೊಳ್ಳಬಹುದು. ಅಹಲ್ಯೆಗೆ ದುಡಿಯುವ ಶಕ್ತಿ ಇದೆ ಎಂದಾದರೊಮ್ಮೆ ಗೆಲ್ಲುವೆನೆಂಬ ಭರವಸೆಯು ಇದೆ. ಬದುಕನ್ನು ಸಮರ್ಥವಾಗಿ ಎದುರಿಸುವ ಛಲವುಳ್ಳ ದಿಟ್ಟ ಹೆಣ್ಣಾಗಿ ಕಾಣುತ್ತಾಳೆ.

ಈ ಕತೆಯಲ್ಲಿ ಸಾಮಾಜಿಕ ಸಮಸ್ಯೆಯೊಂದರ ಚಿತ್ರಣವಿದೆ. ಮೊದಲನೆಯದಾಗಿ ಅಹಲ್ಯೆಯ ತಾಯಿಗೆ ವಿದ್ಯೆಯ ಕೊರತೆ ಇರುವುದರಿಂದ ಮತ್ತು ಅವಳು ಆರ್ಥಿಕವಾಗಿ ಹಿಂದುಳಿದಿದ್ದ ಕಾರಣ ಸಮಸ್ಯೆಯೇ ಅಲ್ಲದ ಅಹಲ್ಯೆಯ ಮುಟ್ಟಿನ ವಿಚಾರ ಇವಳಿಗೆ ಸಮಸ್ಯೆಯಾಗುತ್ತದೆ. ಆರ್ಥಿಕವಾಗಿ ಪ್ರಬಲವಲ್ಲದ ಜನರನ್ನು ಸಮಾಜ ಹೇಗೆ ಶೋಷಿಸುತ್ತದೆ ಎಂಬುದರ ಚಿತ್ರಣವಿದೆ. ಇಲ್ಲಿ ಅಹಲ್ಯೆಯನ್ನು ಮನೆಗೆ ಕರೆಯಿಸಿಕೊಂಡು ದುಡಿಸಿಕೊಳ್ಳುವ ಶಾರದೆಯು ಅಹಲ್ಯೆಯ ಅವಶ್ಯಕತೆಗಳ ಬಗ್ಗೆ ಗಮನವರಿಸುವುದಿಲ್ಲ. ಅವಳ ಭಾವನೆಗಳಿಗೆ ಸ್ಪಂದಿಸುವ ಉದಾರತೆಯನ್ನು ತೋರುವುದಿಲ್ಲ. ಅಹಲ್ಯೆಯನ್ನು ಬರೀ ಕೆಲಸದವಳು ಎಂಬ ದೃಷ್ಟಿಯಿಂದ ಮಾತ್ರ ನೋಡುತ್ತಾಳೆ ಅಹಲ್ಯೆ ಮುಟ್ಟಾದ ತಕ್ಷಣ ಅವಳ ಜವಾಬ್ದಾರಿಯನ್ನು ತನ್ನಿಂದ ಹೊರಲು ಆಗುವುದಿಲ್ಲ

ಎಂದು ವಾಪಸ್ಸು ಕಳುಹಿಸುತ್ತಾಳೆ. ಇಲ್ಲಿ ಅಹಲ್ಯೆಯ ಮೇಲೆ ಮಾತ್ರವಲ್ಲದೆ ತನ್ನ ಗಂಡನ ಮೇಲು ಸಂಶಯ ಪಡುವ ಅವಳು ತನ್ನ ಬದುಕಿಗೆ ಇದರಿಂದ ಅಘಾತವಾಗಬಹುದು ಎಂದು ತಿಳಿದು ಅಹಲ್ಯೆಯನ್ನೇ ತನ್ನ ಮನೆಯಿಂದ ಕಳುಹಿಸಿಬಿಡುತ್ತಾಳೆ. ಇಲ್ಲಿ ಅಹಲ್ಯೆ ಅವಳಿಗೆ ಅರಿವಿದ್ದು ಶೋಷಣೆಗೆ ಒಳಗಾಗುತ್ತಾಳೆ. ಅವಳ ತಾಯಿ ಅರಿವಿಲ್ಲದೆ ಶೋಷಣೆಗೆ ಒಳಗಾಗುವುದನ್ನು ಕಾಣಬಹುದು. ಹೀಗೆ ಹೆಣ್ಣು ತನ್ನೆಲ್ಲ ವೈಭವ ವಿಕಾರಗಳೊಂದಿಗೆ, ಸೌಂದರ್ಯ–ಕುರೂಪಗಳೊಂದಿಗೆ, ಆದರ್ಶ–ವಾಸ್ತವಗಳೊಂದಿಗೆ ಇಡಿಯಾಗಿ, ಸಂಕೀರ್ಣವಾಗಿ ವೈದೇಹಿಯವರ ಕತೆಗಳಲ್ಲಿ ಕಾಣಿಸಿಕೊಳ್ಳುತ್ತಾಳೆ.

" **ಓ ಜಗತ್ತೆ**" ಎಂಬ ಕತೆಯಲ್ಲಿ ಹೆಣ್ಣಿನ ಹಲವು ಕಷ್ಟಗಳಿಗೆ ಅವಳು ಆರ್ಥಿಕವಾಗಿ ಹಿಂದುಳಿದಿರುವುದೇ ಕಾರಣ ಎಂಬುದನ್ನು ಲೇಖಕಿ ಗುರುತಿಸುತ್ತಾರೆ. ಹೆಣ್ಣು ಆರ್ಥಿಕವಾಗಿ ಸಬಲಳಾಗಬೇಕಾದರೆ ಶಿಕ್ಷಣದ ಅವಶ್ಯಕತೆ ಇದೆ. ಅದರಿಂದ ಸಮಾಜದ ಆಗು ಹೋಗುಗಳ ಬಗ್ಗೆ ತಿಳಿಯುವ ಹೆಣ್ಣು, ಲೋಕದೊಂದಿಗೆ ವ್ಯವಹರಿಸುವ ರೀತಿಯನ್ನು ತಿಳಿದುಕೊಳ್ಳುತ್ತಾಳೆ. ಕತಯಲ್ಲಿ " ನಾನು ವಿದ್ಯೆ ಇಲ್ಲದೆ ಕೆಟ್ಟೆ ಅಮ್ಮ ವಿದ್ಯೆ ಇದ್ದು ಬಿಟ್ಟಿದ್ದರೆ ನನ್ನನ್ನು ಒಡಿಯುವವರಿರಲಿಲ್ಲ"[7] ಎಂದು ಮನೆಗೆಲಸ ಮಾಡುವ ಮಾಧು ಹೇಳುತ್ತಾಳೆ. ಇಲ್ಲಿ ಲೇಖಕಿ ಮಾಧುವಿನ ಪಾತ್ರದ ಮೂಲಕ ಹೆಣ್ಣಿನ ಮೂಲಭೂತ ಅವಶ್ಯಕವಾದ ಶಿಕ್ಷಣ ಅವಳ ಬದುಕನಲ್ಲಿ ಎಷ್ಟು ಪ್ರಾಮುಖ್ಯತೆ ಪಡೆಯುತ್ತದೆ ಎಂದು ಹೇಳುತ್ತಾರೆ. ಮಾಧು ಹಣದ ಕೊರತೆಯಿಂದಾಗಿ ತನ್ನ ಮಗನಿಗೆ ಔಷಧಿಯನ್ನು ಕೊಡಿಸಲಾಗದೆ, ಅವನನ್ನು ಕಳೆದುಕೊಳ್ಳುತ್ತಾಳೆ. ಬಡ ಮಹಿಳೆಯ ದುಸ್ಥಿತಿಯ ಚಿತ್ರಣವನ್ನು ಈ ಕತೆಯಲ್ಲಿ ಕಾಣಬಹುದಾಗಿದೆ.

ವಾಸ್ತವ ಬದುಕಿನ ಚಿತ್ರಣವನ್ನು ಕೂಡ ಲೇಖಕಿ ಈ ಕತೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ಶ್ರೀಮಂತರು ಎಂದಿಗೂ ಬಡವರ ಮೇಲೆ ಕರುಣೆ ತೋರುವುದಿಲ್ಲ. ತಮ್ಮ ಐಷಾರಾಮದ ಬದುಕಿನಲ್ಲಿ ಕಳೆಯುವ ಅವರಿಗೆ ಬಡವರ ಕಷ್ಟಗಳ ಪರಿವೆ ಇರುವುದಿಲ್ಲ. ಶ್ರೀಮತಿ ದೇಶಪಾಂಡೆ ಡಾಕ್ಟರ್‌ನ ಪತ್ನಿ ಒಡವೆ ವಸ್ತ್ರಗಳನ್ನು ಕೊಳ್ಳುವ ತರಾತುರಿಯಲ್ಲೇ ಇರುತ್ತಾಳೆ. ಅವಳಿಗೆ ಮಾಧುವಿನ ಮಗನ ಸಾವು ಏನು ವಿಶೇಷವೆನಿಸುವುದಿಲ್ಲ, ಸಾಮಾನ್ಯ ಘಟನೆಗಳಂತೆ ಅದು ಒಂದು ಎಂದು ಭಾವಿಸಿ "ಹೋದನೆ, ಪಾಪ, ಏನು ಮಾಡಲಾಗುತ್ತದೆ ಹೇಳಿ. ನಿಮಗೆ ಕೆಲಸವಿದೆಯೋ ಏನೋ ನಾನು ಹೋಗುತ್ತೇನೆ."[8] ಎಂದು ನಿರ್ವಿಕಾರ ಮುಖದಿಂದ ಹೇಳಿ ಹೊರಟು ಹೋಗುತ್ತಾಳೆ.

ತನ್ನ ಸೀರೆಯ ಅಂದಚಂದವನ್ನು ವರ್ಣಿಸುತ್ತಿದ್ದ ದೇಶಪಾಂಡೆ ಅದರಲ್ಲೇ ತಲ್ಲೀನಳಾಗಿದ್ದಾಳೆ. ಹೋಗುವಾಗು ಮಿಸೆಸ್ ರಾವ್‌ಗೆ ನೀವು ಅದೇ ತರದ ಸೀರೆ ಕೊಂಡುಕೊಳ್ಳಿ ದೀಪಾವಳಿ ಹಬ್ಬಕ್ಕೆ ಎಂದು ಹೇಳುತ್ತಾಳೆ. ಮಾಧು ವರ್ಷಗಟ್ಟಲೆ ದುಡಿದ ೩೦೦ ರೂಪಾಯಿ, ಡಾಕ್ಟರ್‌ನ ಹೆಂಡತಿಯಾದ ದೇಶಪಾಂಡೆ ಅರ್ಧ ಘಂಟೆಯಲ್ಲೇ ಸೀರೆ ಕೊಂಡುಕೊಳ್ಳಲು ಉಪಯೋಗಿಸಿತ್ತಾಳೆ. ಆದರೆ ಮಾಧುವು ಡಾಕ್ಟರ್‌ಗೆ ಮುನ್ನೂರು ರೂಪಾಯಿ ಕೊಟ್ಟರು ಮಗನನ್ನು ಉಳಿಸಕೊಳ್ಳಲು ಸಾಧ್ಯವಾಗಲಿಲ್ಲ.

ನಮ್ಮ ಸಮಾಜದ ಆರ್ಥಿಕ ಮತ್ತು ಸಾಮಾಜಿಕ ಸಂದರ್ಭದಲ್ಲಿ ಸಮಾನತೆಯನ್ನು ಸಾಧಿಸಲಾಗದಿರುವ ಹೆಣ್ಣಿನ ಅಂತರಂಗದ ತುಡಿತ, ಮಿಡಿತ, ಸಹಸ್ಪಂದನಗಳು ಪುರುಷರ ಸ್ಪಂದನೆಗಿಂತ ಭಿನ್ನ ರೀತಿಯದಾಗಿದೆ.

ಇಲ್ಲಿಯ ಹೆಣ್ಣುಗಳು ಸರಿ–ತಪ್ಪುಗಳ ನಡುವೆ ಬದುಕನ್ನು ಸರಳೀಕೃತಗೊಳಿಸಿಕೊಳ್ಳುವುದಿಲ್ಲ. ಬದಲಾಗಿ ಛಲಗಾರಿಕೆ, ಸ್ವಾಭಿಮಾನ, ಗಟ್ಟಿ ವ್ಯಕ್ತಿತ್ವವುಳ್ಳ ಹೆಣ್ಣುಗಳ ಚಿತ್ರಣವೂ ಇದೆ. ಹಾಗೆಯೇ ತನ್ನ ಅಸ್ತಿತ್ವಕ್ಕಾಗಿ ಗಂಡಿನೊಡನೆ, ಸಮಾಜದೊಡನೆ ಅನುಸಂಧಾನ ಮಾಡಿಕೊಂಡು, ಪಾರಂಪರಿಕ ಮೌಲ್ಯಗಳನ್ನು ಎತ್ತಿಹಿಡಿಯುತ್ತಾ ಪ್ರಯಾಸದ ಜೀವನ ನಡೆಸುವ ಸ್ತ್ರೀ ಪಾತ್ರಗಳ ಚಿತ್ರಣಗಳು ವೈದೇಹಿಯವರ ಕತೆಗಳಲ್ಲಿ ಮಿಳಿತಗೊಂಡಿವೆ. ಒಟ್ಟಿನಲ್ಲಿ ಪುರುಷ ಕಲ್ಪಿತ ಮಾನದಂಡಗಳು ತಮ್ಮ ಮೇಲೆ ಹೇರಲ್ಪಟ್ಟಾಗ ಅವುಗಳಿಗೆ ಅಂಟಿಕೊಂಡು ಬದುಕಿದ ಪಾತ್ರಗಳು ಇಲ್ಲಿ ಕಂಡುಬರುತ್ತವೆ.

**"ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು"** ಕತೆಯಲ್ಲಿ ಬರುವ ಹೆಂಗಸರು ಆರ್ಥಿಕವಾಗಿ ಕಂಗೆಟ್ಟವರು. ಹೆಣ್ಣು ಮತ್ತು ಶೀಲವನ್ನು ಕುರಿತಂತೆ ಇರುವ ಸಾಮಾಜಿಕ ನಿರೀಕ್ಷೆಗಳನ್ನು ದಾಟಲು ಸಾಮಾರ್ಥ್ಯವಿಲ್ಲದ ದುರ್ಬಲ ಮಹಿಳೆಯರು. ಆದರೂ ಬದುಕಲು ಛಲವುಳ್ಳವರು. ಪುಟ್ಟಮ್ಮತ್ತೆ ಎಲ್ಲರ ಮನೆ ಕೆಲಸವನ್ನು ಪುಕ್ಕಟೆಯಾಗಿ ಮಾಡಿಕೊಡುವವಳು. ಯಾರ ಮನೆಯಲ್ಲಿ ಸಮಾರಂಭ, ಹೆಚ್ಚುಗಟ್ಟಲೆ ಮಾಡಿದರೂ, ಹಪ್ಪಳ, ಸಂಡಿಗೆ, ಉಪ್ಪಿನಕಾಯಿ ಮಾಡುವಾಗಲೂ ಪುಟ್ಟಮ್ಮತ್ತೆಯ ಸಹಾಯ ಬೇಕೇ ಬೇಕು. ಇದರಿಂದ ಪುಟ್ಟಮ್ಮತ್ತೆಗೆ ಯಾವ ರೀತಿಯ ಆರ್ಥಿಕ ಲಾಭವೂ ಇಲ್ಲ. ಆದರೂ ಕೂಡ ಯಾರು ಏನು ಹೇಳಿದರು, ಯಾವ ಗೊಣಗಾಟವಿಲ್ಲದೆ ಬೇಸರಿಸದೆ ಮಾಡಿಕೊಡುತ್ತಳೆ. ಆದರೆ ಅವಳ ಮೊಮ್ಮಗಳಾದ ಕಮಲಾವತಿ ಅಜ್ಜಿಯ ಧೋರಣೆಯನ್ನು ಹೊಂದಿಲ್ಲ. ಸ್ವಲ್ಪ ಮಟ್ಟಿಗೆ ಆಧುನಿಕತೆಯ ಪ್ರಭಾವಕ್ಕೆ ಒಳಗಾದವಳು. ಅಜ್ಜಿ ಹಣ ತೆಗೆದುಕೊಳ್ಳದೇ ಕೆಲಸ ಮಾಡುವುದನ್ನು ವಿರೋಧಿಸುತ್ತಾಳೆ. ಎಲ್ಲೂ ತಮ್ಮ ಅಸ್ತಿತ್ವ ಇಲ್ಲದಕ್ಕಾಗಿ ಮರುಗುತ್ತಾಳೆ. ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಹೆಣಗಾಡುತ್ತಾಳೆ. ಹೆಣ್ಣು ಹೊರಗೆ ಹೋಗಿ ದುಡಿಯುವುದು ಸರಿಯಲ್ಲ. ಹಾಗೆ ಮಾಡಿದ ಹೆಣ್ಣು ಒಳ್ಳೆಯವಳಲ್ಲ ಎಂಬ ಸಾಮಾಜಿಕ ನಿರ್ಬಂಧಗಳನ್ನು ಮೀರಲು ಪ್ರಯತ್ನಿಸುತ್ತಾಳೆ. ಸಮಾಜವನ್ನು ಧಿಕ್ಕರಿಸಿ ತಾನು ಮತ್ತು ತನ್ನ ಮನೆ ಎಂಬ ರೀತಿಯಲ್ಲಿ ಬದುಕುತ್ತಾಳೆ.

ಸಮಾಜದ ಪಾರಂಪರಿಕ ವ್ಯವಸ್ಥೆಗೆ ಅಂಟಿಕೊಂಡ ಅಜ್ಜಿಯ ಧೋರಣೆಗಳನ್ನು ಬದಲಾಯಿಸಲು ಮೊಮ್ಮಗಳು ಪ್ರಯತ್ನಿಸುತ್ತಾಳೆ. ಕತೆಯುದ್ದಕ್ಕೂ ಪರಂಪರೆ ಮತ್ತು ಆಧುನಿಕತೆಗಳ ನಡುವಿನ ವೈರುಧ್ಯವನ್ನು ಚಿತ್ರಿಸುವುದರೊಂದಿಗೆ ಅವುಗಳ ನಡುವೆ ನಡೆಯುವ ಸಂಘರ್ಷವನ್ನು ಚಿತ್ರಿಸಲು ಲೇಖಕಿ ಪ್ರಯತ್ನಿಸಿದ್ದಾರೆ. ಪುಟ್ಟಮ್ಮತ್ತೆ ತನ್ನ ಕಾಲದ ಹೊಸ ಮೌಲ್ಯಗಳನ್ನು ಮೀರಿ ಪಾರಂಪರಿಕ ಮೌಲ್ಯವಾದ ಸಾತತ್ಯವನ್ನು ಶೋಧಿಸಿಕೊಳ್ಳಲು ಹವಣಿಸಿದರೆ, ಮೊಮ್ಮಗಳು ಪಾರಂಪರಿಕ ಮೌಲ್ಯಗಳನ್ನು ಮೀರಿ ಹೊಸ ಮೌಲ್ಯಗಳೊಂದಿಗೆ ಗುರುತಿಸಿಕೊಳ್ಳಲು ಯತ್ನಿಸುತ್ತಾಳೆ. ಈ ಬಗೆಯ ತಲೆಮಾರುಗಳ ತಾಕಲಾಟವನ್ನು, ಸಾಮಾಜಿಕ ಸ್ಥಿತ್ಯಂತರಗಳನ್ನು ಈ ಕತೆ ತಿಳಿಸುತ್ತದೆ. ಮಹಿಳೆಯಲ್ಲಾಗುವ ಆಧುನಿಕ ಬದಲಾವಣೆಗಳನ್ನು ಸಮಾಜ ಮುಕ್ತವಾಗಿ ಸ್ವೀಕರಿಸುವುದಿಲ್ಲವೆಂಬುದನ್ನು ನಾವು ಇಲ್ಲಿ ಗಮನಿಸಬಹುದಾಗಿದೆ.

**"ಗೂಡಿನೊಳಗೆ ಒಂದು ಹಕ್ಕಿ"** ಕತೆಯೂ ಸ್ತ್ರೀ ವಿಮೋಚನೆಯ ಪರಿಕಲ್ಪನೆಗೆ ಹಿಡಿದ ಕನ್ನಡಿಯಾಗಿದೆ. ಹೆಣ್ಣಿನ ಸ್ವಾತಂತ್ರ್ಯದ ಬಯಕೆಯೊಂದು ಸಾಂಕೇತಿಕವಾಗಿ ಅರ್ಥವತ್ತಾಗಿ ಮೈಪಡೆದುಕೊಂಡಿರುವುದನ್ನು ಇಲ್ಲಿ ಗುರುತಿಸಬಹುದಾಗಿದೆ. ಯಾರ ನಿರ್ಬಂಧವಿಲ್ಲದೆ, ಯಾರ ಸಂಪರ್ಕವಿಲ್ಲದೆ ಸ್ವಚ್ಛಂದವಾಗಿ ಬದುಕಬೇಕು ಎಂದು

ನಿರ್ಧರಿಸಿದ ನಾಯಕಿ ಮನೆಯ ಹೊರಗಿನಿಂದ ಬೀಗ ಹಾಕಿ ಹೋಗಲು ಹೇಳುತ್ತಾಳೆ. ಗಂಡ ಹಾಗೆ ಮಾಡಿ ಮನೆ ಬಿಟ್ಟ ನಂತರ ತನ್ನ ಬಟ್ಟೆಯನ್ನೆಲ್ಲ ಕಳಚುತ್ತಾಳೆ. ಈಗ ತನ್ನನ್ನು ನೋಡುವವರು ಯಾರು ಇಲ್ಲ ಆದ್ದರಿಂದ ತನ್ನ ದೇಹಕ್ಕೆ ಯಾವ ರಕ್ಷಣೆಯು ಬೇಕಿಲ್ಲ ಎಂದುಕೊಳ್ಳುತ್ತಾಳೆ. ಇಲ್ಲಿ ಅವಳು ಬೆತ್ತಲಾಗುವುದು ಮುಕ್ತವಾಗಿ ಇರಲು ಬಯಸುವ ಅವಳ ಮನಸ್ಥಿತಿಯನ್ನು ಸೂಚಿಸುತ್ತದೆ. ಸಾಮಾಜಿಕವಾಗಿ ಹೇರಲ್ಪಟ್ಟಂತಹ ಎಲ್ಲ ನಿರ್ಬಂಧಗಳನ್ನು ಮೀರಬೇಕು ಎಂದು ಬಯಸುತ್ತಾಳೆ. ಆದರೂ ಸಂಭ್ರಮದಿಂದ ಇರಲಾರದ ಅವಳ ಸ್ಥಿತಿಯನ್ನು ಲೇಖಕಿ ಚಿತ್ರಿಸಿದ್ದಾರೆ. ಹೆಣ್ಣು ಸಾಮಾಜಿಕ ಉಪಾಧಿಗಳನ್ನು ಮೀರುತ್ತಾ ತನಗೆ ತಾನೇ ಹಾಕಿಕೊಂಡ ಅಂತರಂಗದ ಬೇಲಿಯನ್ನು ದಾಟಲಾಗದೆ ಇರುವುದನ್ನು ಇಲ್ಲಿ ಕಾಣಬಹುದಾಗಿದೆ. ಈ ಅಂತರಂಗದ ಬೇಲಿಯು ಅವಳನ್ನು ಎಷ್ಟರ ಮಟ್ಟಿಗೆ ನಿಯಂತ್ರಿಸುತ್ತದೆ ಎಂಬುದನ್ನು ಈ ಕತೆಯಲ್ಲಿ ಅನಾವರಣಗೊಳಿಸಲಾಗಿದೆ. ಕೊನೆಗೆ ಮತ್ತೆ ತನ್ನ ಹಿಂದಿನ ನಿರ್ಬಂಧದ ಬದುಕಿಗೆ ಹಿಂತಿರುಗುವ ಮತ್ತು ಅದನ್ನು ಒಪ್ಪಿಕೊಳ್ಳುವ ಹೆಣ್ಣಿನ ಚಿತ್ರಣವು ಇಲ್ಲಿದೆ.

"**ಬೀಳು-ಬೇರು**" ಕತೆಯಲ್ಲಿ ಇಂದಿ ಎಂಬ ಅವಿವಾಹಿತೆ ಈ ಕತೆಯ ನಾಯಕಿ. ಅನೇಕ ವರಗಳು ಇವಳನ್ನು ಮಾರುಕಟ್ಟೆಯ ವಸ್ತು ಎಂಬಂತೆ ನೋಡುತ್ತವೆ. ಇಂದಿಯ ಮೌನ ಮತ್ತು ದುಃಖ ಕತೆಯ ಉದ್ದಕ್ಕೂ ಅನುರಣಿತವಾಗುತ್ತಲೇ ಇರುತ್ತದೆ. ಇಂದಿಯ ಅಭಿವ್ಯಕ್ತಿಯ ಮಾಧ್ಯಮ ಮಾತಲ್ಲ, ಅಳು. ಇಂದಿಯ ಮನೆಯಲ್ಲಿ ಎಮ್ಮೆಕೊಳ್ಳುವ ಪ್ರಯತ್ನ, ಇಂದಿಯ ಮದುವೆ ಪ್ರಯತ್ನದೊಂದಿಗೆ ತಳುಕುಹಾಕಿಕೊಂಡಿದೆ. ಎಮ್ಮೆಯನ್ನು ಹೇಗೆ ಹಲವು ರೀತಿಯ ಪರೀಕ್ಷೆಗೆ ಒಳಪಡಿಸಿ, ವ್ಯಾಪಾರ ಕುದುರಿಸಿ ತಮ್ಮ ಮನೆಗೆ ಸೂಕ್ತವೆಂದು ನಿರ್ಧರಿಸಿ ತಂದುಕೊಳ್ಳುತ್ತಾರೋ ಅದೇ ರೀತಿ ಹೆಣ್ಣನೊಂದಿಗೂ ಅಭಿವ್ಯಕ್ತಿಯೇ ಇಲ್ಲದ ಮೂಕ ಪ್ರಾಣಿಯ ರೀತಿ ವ್ಯವಹರಿಸುವುದನ್ನು ಇಲ್ಲಿ ಕಾಣಬಹುದಾಗಿದೆ. ಸಾಮಾಜಿಕವಾಗಿ ಹೆಣ್ಣಿನ ಸ್ಥಾನವನ್ನು ಪ್ರಾಣಿ ಪ್ರಪಂಚಕ್ಕೆ ಹಾಗೂ ವ್ಯಾಪಾರ, ವ್ಯವಹಾರ ಚಟುವಟಿಕೆಗಳಿಗೆ ಇಳಿಸಿಬಿಟ್ಟಿರುವುದನ್ನು ಈ ಕತೆ ಪರಿಶೀಲಿಸುತ್ತದೆ. ತನ್ನ ಸ್ವಂತಿಕೆಯನ್ನು ವ್ಯಕ್ತಪಡಿಸಲು ಅವಳಿಗೆ ಎಲ್ಲೂ ಅವಕಾಶ ಸಾಧ್ಯವಾಗದಂತೆ, ಒಂದು ಯಂತ್ರದಂತೆ, ಮೂಕ ಪ್ರಾಣಿಯಂತೆ, ಪಿತೃ ಸಮಾಜದ ಮೌಲ್ಯಗಳಿಗೆ ಬದ್ಧಳಾಗಿರಬೇಕು ಎಂಬ ಒತ್ತಡವನ್ನು ಈ ಕತೆಯ ನಾಯಕಿ ಅನುಭವಿಸುತ್ತಾಳೆ. ಹೆಣ್ಣನ್ನು ತನ್ನ ಗುಲಾಮಳಾಗಿ ಹೇಗೆ ಬೇಕೋ ಹಾಗೆ ರೂಪಿಸುತ್ತದೆ ಎಂಬುದಕ್ಕೆ ಈ ಕತೆ ಉತ್ತಮ ನಿದರ್ಶನವಾಗಿದೆ. ದೈಹಿಕವಾಗಿ, ಮಾನಸಿಕವಾಗಿ, ಭಾವಾತ್ಮಕವಾಗಿ ಎಲ್ಲ ರೀತಿಯಲ್ಲೂ ಯಾವ ಸ್ವಾತಂತ್ರ್ಯವೂ ಇಲ್ಲದೆ ತನ್ನ ವ್ಯಕ್ತಿತ್ವದ ಚಹರೆಯನ್ನು ಗುರುತಿಸಿಕೊಳ್ಳಲಾಗದ ಶೋಷಿತ ಹೆಣ್ಣಿನ ಚಿತ್ರಣವನ್ನು ಕಟ್ಟಿಕೊಡುವಲ್ಲಿ ಈ ಕತೆ ಯಶಸ್ವಿಯಾಗಿದೆ.

ಹೆಣ್ಣು ಜಗತ್ತಿನ ವಿವರಗಳನ್ನು ಮಂಡಿಸುವುದು, ದೈನಂದಿನ ಜಗತ್ತನ್ನು ತೋರುವಂತೆ ಕಾಣುವ ಈ ವಿವರಗಳಲ್ಲಿ ಹಲವು ತಲೆಮಾರುಗಳ ಹೆಂಗಸರನ್ನು ಚಿತ್ರಿಸುತ್ತಲೇ ಬದಲಾಗುತ್ತಿರುವ ಸಾಮಾಜಿಕ ವಿನ್ಯಾಸದ ಸೂಕ್ಷ್ಮಗಳನ್ನು ಎದುರಿಗಿಡುವ ಪ್ರಯತ್ನವನ್ನು ವೈದೇಹಿಯವರು ಇಲ್ಲಿ ಮಾಡಿದ್ದಾರೆ.

'**ಒಂದು ಅಪರಾಧ ತನಿಖೆ**' ಕತೆಯಲ್ಲಿ ಗಂಡನನ್ನು ತೊರೆದು ತವರಿಗೆ ಬಂದ ಕುಸುಮಳ ಮನಸ್ಸು ಈಗ ತೀರಾ ಸೂಕ್ಷ್ಮವಾಗಿ ಪ್ರತಿಯೊಂದಕ್ಕೂ ಪ್ರತಿಕ್ರಿಯಿಸುತ್ತದೆ. ಅಡುಗೆಯವಳ ಮಗಳು ಬಾಬಿ ಕುಸುಮಾ ಗಂಡನನ್ನು ಬಿಟ್ಟು ಬಂದದ್ದೇಕೆ? ಎಂಬ ಪ್ರಶ್ನೆ ಹಾಕುತ್ತಾಳೆ. ಆಕೆಯ ತನಿಖೆಗೆ ಬೆಚ್ಚಿ ಬೀಳುವ ಕುಸಮಳ ಪ್ರಜ್ಞೆ

ಅಮ್ಮ, ಅಣ್ಣಂದಿರ ಸ್ವಭಾವದಲ್ಲಾದ ಬದಲಾವಣೆಯನ್ನು ಗ್ರಹಿಸುತ್ತದೆ.

ಕುಸುಮಳ ವಿಷಮ ದಾಂಪತ್ಯದ ಒಂದು ಮಾದರಿಯನ್ನು ಇಲ್ಲಿ ಚಿತ್ರಿಸಲಾಗಿದೆ. ಕತೆ ಸಂಕೀರ್ಣವಾಗುವುದು ಬಾಬಿ [illegible] ಮಾಗಿಲಸದ ಹೆಂಗಸಿನ ಅನುಭವದ ತುಲನೆಯಲ್ಲಿ. ಬಾಬಿಯ ದಾಂಪತ್ಯ ಜೀವನ ಕೂಡ ಸಾಕಷ್ಟು ಪರಿಳಿತಗಳನ್ನು ಕಂಡಿದ್ದರೂ ಅವಳು ಈಗ ತನ್ನ ಚಿಕ್ಕ ವಯಸ್ಸಿನ ಮಗಳ ಮದುವೆ ಮಾಡಲು ಹೊರಟಿದ್ದಾಳೆ. ಅವಳಿಗೆ ಮದುವೆಯಾದವರ ಕಷ್ಟ ಗೊತ್ತಿದ್ದರೂ ಸ್ವತಃ ತಾನೇ ಅನುಭವಿಸಿದ್ದರೂ ಮಗಳ ವಿಷಯದಲ್ಲಿ ಅವಳ ಧೋರಣೆಯೇ ಬೇರೆಯಾಗಿರುತ್ತದೆ. ತನಗೆ ಬಂದ ಕಷ್ಟಗಳ ಹಾಗೆ ಮಗಳಿಗೂ ಕಷ್ಟಗಳು ಬರಬಹುದು ಎಂದು ಯೋಚಿಸುವುದಿಲ್ಲ. ಒಟ್ಟಿನಲ್ಲಿ ಮಗಳ ಮದುವೆ ಮಾಡಿ ತನ್ನ ಜವಾಬ್ದಾರಿಯನ್ನು ಕಳೆದುಕೊಳ್ಳಬೇಕು. ಜೊತೆಗೆ ತಾನೂ ಹೇಗೆ ಜೀವನದ ಎಲ್ಲ ಕಷ್ಟಗಳನ್ನು ದಿಟ್ಟತನದಿಂದ ಎದುರಿಸಿ ಪರಿಹಾರ ಕಂಡುಕೊಂಡು ಬದುಕಿದೆನೋ ಹಾಗೆಯೇ ಮಗಳೂ ಸಹ ಎಲ್ಲವನ್ನು ನಿಭಾಯಿಸಲಿ ಎಂಬುದು ಬಾಬಿಯ ಯೋಚನೆಯಾಗಿದೆ.

ಬಾಬಿ ಇವಳೊಟ್ಟಿಗೆ ತನಗೆ ಸಹಜವೆಂಬಂತೆ ಮಾತನಾಡುವುದು ಕುಸುಮಳಿಗೆ ಒಂದು ಅಪರಾಧದ ತನಿಖೆಯಾಗಿ ಕಾಣುತ್ತದೆ. ಬಾಬಿ ಅನಕ್ಷರಸ್ಥೆಯಾಗಿದ್ದು, ಬಡತನದಲ್ಲಿದ್ದು ಜೀವನವನ್ನು ಧೈರ್ಯದಿಂದ ಎದುರಿಸುವ ಮನೋಸಾಮರ್ಥ್ಯವನ್ನು ಹೊಂದಿದ್ದಾಳೆ. ಅದೇ ಕುಸುಮ ಎಲ್ಲ ರೀತಿಯ ಸೌಕರ್ಯವಿದ್ದು ಸಮಸ್ಯೆಯನ್ನು ಪರಿಹರಿಸುವ ದಾರಿ ಹುಡುಕುವಲ್ಲಿ ಸೋಲನ್ನನುಭವಿಸುತ್ತಾಳೆ. ತನ್ನ ಭಾವನೆಗಳ ತುಮುಲವನ್ನು ಅಂತರಂಗದ ತುಡಿತವನ್ನು ಅಭಿವ್ಯಕ್ತಿಸಲಾಗದೇ ಪರದಾಡುತ್ತಾಳೆ. ಇಲ್ಲೆಲ್ಲಾ ಬಾಬಿ–ಕುಸುಮಳ ನಡುವಿನ ಸಾದೃಶ್ಯ–ವೈದೃಶ್ಯಗಳನ್ನು ವೈವಾಹಿಕ ಜೀವನದ ಒಂದು ಸಂಕೀರ್ಣ ವಿನ್ಯಾಸವನ್ನು ವೈದೇಹಿಯವರು ಇಲ್ಲಿ ನೇಯ್ದಿದ್ದಾರೆ. ಇಲ್ಲಿ ಬಾಬಿ ಸಾಮಾಜಿಕ ಕಟ್ಟುಪಾಡುಗಳೊಂದಿಗೆ ಅನಿವಾರ್ಯವೆಂಬಂತೆ ರಾಜಿ ಮಾಡಿಕೊಂಡು ಬದುಕನ್ನು ಸಾಗಿಸುತ್ತಾಳೆ.

ಗಂಡನನ್ನು ಬಿಟ್ಟು ಕುಸುಮಾ ಸಾರ್ವಜನಿಕ ಜೀವನದಲ್ಲಿ ತನ್ನನ್ನು ತೊಡಗಿಸಿಕೊಳ್ಳಲು ಹಿಂಜರಿಯುತ್ತಾಳೆ. ಅವಳನ್ನು ಬಾಬಿ ಅನೇಕ ಪ್ರಶ್ನೆಗಳನ್ನು ಕೇಳುತ್ತಾಳೆ. ಅದು ಗಂಡನನ್ನು ಬಿಟ್ಟ ಹೆಣ್ಣನ್ನು ಈ ಸಮಾಜ ಕೇಳುವ ಹಲವು ಪ್ರಶ್ನೆಗಳೇ ಆಗಿವೆ. ಆದರೆ ಬಾಬಿ ಅದೇ ರೀತಿಯ ಸಮಸ್ಯೆಯನ್ನು ತನ್ನ ಧೈರ್ಯದಿಂದ, ಬುದ್ಧಿವಂತಿಕೆಯಿಂದ ಬಗೆಹರಿಸಿಕೊಂಡು ಸಮಾಜ ಕೇಳುವ ಪ್ರಶ್ನೆಗಳಿಂದ ತಪ್ಪಿಸಿಕೊಳ್ಳುತ್ತಾಳೆ. ಕುಸುಮಳಲ್ಲಿ ಆ ಕೆಚ್ಚು ಇಲ್ಲ, ಸಮಾಜವನ್ನು ಎದುರಿಸುವ ಧೈರ್ಯವು ಇಲ್ಲ. ಒಳಗೊಳಗೆ ಕೊರಗುತ್ತಾ ಸಮಾಜದಿಂದ ದೂರ ಸರಿಯುವ ಪ್ರಯತ್ನ ಮಾಡುತ್ತಾಳೆ. ವೈದೇಹಿಯವರ ' **ಚಂದಲೆ** ' ಒಂದು ಸಂಕೀರ್ಣವಾದ ಕತೆ. ಇದು '**ಶಿಷ್ಟ**' ಸಮಾಜದ ಬೀನಾ ಮತ್ತು ವೇಶ್ಯೆಯೊಬ್ಬಳ ಮಗಳು ಚಂದಲೆಯ ನಡುವಿನ ಮುಖಾಮುಖಿಯನ್ನು ಹೇಳುತ್ತದೆ. ಲೈಂಗಿಕ ಸಂಬಂಧಗಳ ಬಿಕ್ಕಟ್ಟು ಹಾಗೂ ಮೌಲ್ಯಗಳ ಪರಿಶೋಧನೆ ಈ ಕತೆಯ ಮುಖ್ಯ ಚಿಂತನೆಯಾಗಿದೆ.

ಚಂದಲೆಯ ಜೀವನಕ್ರಮ, ಬೀನಾಳ ದಿಟ್ಟತನಗಳು ನಿರೂಪಕಿಯನ್ನು ತಬ್ಬಿಬ್ಬುಗೊಳಿಸುತ್ತವೆ. ಚಂದಲೆಯ ಜೀವನಕ್ರಮವಂತೂ ಸಮಾಜದಲ್ಲಿ ಸ್ಥಾಪಿತವಾದ ವೇಶ್ಯಾವೃತ್ತಿಯದು. ಆದರೆ 'ಶಿಷ್ಟ' ಸಮಾಜದಲ್ಲಿ ಬಾಳಬೇಕಾದ ಬೀನಾಳ ದಿಟ್ಟತನ, ಧೈರ್ಯಗಳು ನಿರೂಪಕಿಯಲ್ಲಿ ಕಂಪನಗಳನ್ನು ಎಬ್ಬಿಸುತ್ತವೆ. ಇನ್ನೂ ಸ್ಕರ್ಟ್ ತೊಡುವ ಸ್ಕೂಲ್ ವಿದ್ಯಾರ್ಥಿನಿಯಾದ ಅವಳು ಸೂಳೆಯಂತಿರಬೇಕು ಎಂದು ತನ್ನ ಮನದ ಬಯಕೆಯನ್ನು ವ್ಯಕ್ತಪಡಿಸಿದಾಗ

ನಿರೂಪಕಿ ದಿಗ್ಭ್ರಮೆಗೆ ಒಳಗಾಗುತ್ತಾಳೆ. ಆದರೆ ಅದೇ ಬೀನಾ ಮದುವೆಯಾಗಿ ಒಂದು ಮಗುವಿನ ತಾಯಿಯಾಗಿ ಹಾಸಿಗೆಯ ಮೇಲೆ ಮಲಗಿದ್ದಾಗ ಅವಳಲ್ಲಿ ಆ ರೀತಿಯ ಯಾವ ಬಯಕೆಯು ಇದ್ದಂತೆ ತೋರುವುದಿಲ್ಲ. ನಿರೂಪಕಿಯು ತನ್ನ ಬಾಲ್ಯವನ್ನು ಬೀನಾಳ ಬಾಲ್ಯದೊಂದಿಗೆ ಹೋಲಿಸಿಕೊಳ್ಳುತ್ತಾಳೆ. ಬೀನಾಳ ಹಾಗೆಯೇ ತನ್ನಲ್ಲೂ ಯೌವ್ವನದ ಬಯಕೆಗಳಿದ್ದರೂ ಯಾರೊಡನೆಯೂ ಹೇಳಿಕೊಳ್ಳುವ ಧೈರ್ಯವಿರಲಿಲ್ಲದ್ದನ್ನು ನೆನೆಯುತ್ತಾಳೆ. ಇಲ್ಲಿ ಯುವತಿಯರಲ್ಲಿ ಇರಬಹುದಾದ ಲೈಂಗಿಕ ಕುತೂಹಲಗಳು, ಲೈಂಗಿಕ ಸಂಕೋಚಗಳ ಅತಿರಂಜಿತ ಕಲ್ಪನೆಗಳು ಮತ್ತು ಅವರ ಅಂತರಂಗ–ಬಹಿರಂಗಗಳ ತಾಕಲಾಟಗಳನ್ನು, ಮನಸ್ಥಿತಿಗಳನ್ನು ಚಂದಲೆ, ಬೀನಾ ಮತ್ತು ಗೃಹಿಣಿಯ ಪಾತ್ರಗಳ ಮೂಲಕ ಬಿಂಬಿಸುವ ಪ್ರಯತ್ನವನ್ನು ವೈದೇಹಿಯವರು ಮಾಡಿದ್ದಾರೆ.

ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಘಟಿಸಿದ ಕಹಿ ನೆನಪುಗಳನ್ನು, ಹೆಣ್ಣಿನ ಬದುಕಿನಲ್ಲಿ ಅದು ಉಂಟುಮಾಡಿದ ಅಲ್ಲೋಲ ಕಲ್ಲೋಲಗಳನ್ನು ವೈದೇಹಿಯವರು **"ಕ್ರೌಂಚ ಪಕ್ಷಿಗಳು"** ಎಂಬ ಕತೆಯಲ್ಲಿ ವಿವರಿಸುತ್ತಾರೆ. ದೇಶ ವಿಭಜನೆಯ ಸಂದರ್ಭದಲ್ಲಿ ನಡೆದ ಘಟನೆಯನ್ನು ಕತೆಯ ಮುಖ್ಯ ವಸ್ತುವಾಗಿಟ್ಟುಕೊಂಡು, ಅದರ ಹಿನ್ನಲೆಯಲ್ಲಿ ಹೆಣ್ಣಿನ ಬದುಕನ್ನು ಚಿತ್ರಿಸುತ್ತಾರೆ. " ಮನುಷ್ಯ ಮನುಷ್ಯನಾಗಿರೋದು ಸಾಮಾನ್ಯ ಸ್ಥಿತಿಯಲ್ಲಿ ಮಾತ್ರ. ಸಿದ್ಧಾಂತ, ತತ್ವ, ರೀತಿ ನೀತಿಗಳ ಬುಡ ತುಸುವೇ ಅಲ್ಲಾಡಿದರೂ ಮೊದಲು ಬಲಿಯಾಗೋದು ಮಹಿಳೆ. ಅವಳ ದೇಹ, ಅವಳ ಮನಸ್ಸು, ಅವಳ ಬದುಕು"[6] ಇಲ್ಲಿ ಭಟ್ಟರ ಹೆಂಡತಿಯು ಅಪಹರಣಕೊಳಗಾಗುತ್ತಾರೆ. ಇದರಿಂದ ಭಟ್ಟರು ಅವಳನ್ನು ಸ್ವೀಕರಿಸುವುದಿಲ್ಲ. ಯಾರಲ್ಲಿಯು ಇದನ್ನು ಹೇಳಿಕೊಳ್ಳುವುದಿಲ್ಲ. ಬದಲಾಗಿ ತಾನು ಎಷ್ಟು ಹುಡುಕಿದರು ಸಿಗಲಿಲ್ಲ ಅದಕ್ಕೆ ಬೇರೆ ಮದುವೆ ಮಾಡಿಕೊಂಡೇ ಎಂದು ಸುಳ್ಳು ಹೇಳುತ್ತಾರೆ. ಆದರೆ ಸತ್ಯ ಸಂಗತಿಯೇ ಬೇರೆಯಾಗಿರುತ್ತದೆ. ಪುನರ್ವಸತಿ ಕೇಂದ್ರದಲ್ಲಿ ಭಟ್ಟರ ಹೆಂಡತಿ ಲಕ್ಷ್ಮಮ್ಮ ಇರುತ್ತಾರೆ.

ಹೆಂಡತಿಯನ್ನು ಹುಡುಕಲು ಅಲ್ಲಿಗೆ ಬಂದ ಭಟ್ಟರು ಅವರನ್ನು ಕಂಡು ಕಾಣದ ರೀತಿ ಹೋಗುತ್ತಾರೆ. ಇಲ್ಲಿ ಭಟ್ಟರಿಗೆ ಸಮಾಜದ ಭಯವಿದೆ. ಆಗಿನ ಸಮಾಜದಲ್ಲಿ ಅದು ಬ್ರಾಹ್ಮಣ ಮನೆಗಳಲ್ಲಿ ಹೆಣ್ಣನ್ನು ಹೊರಗಡೆಯೇ ಕಳುಹಿಸುತ್ತಿರಲಿಲ್ಲ, ಅಂತದ್ದರಲ್ಲಿ ಎಷ್ಟೋ ದಿನ ಯಾರ ಮನೆಯಲ್ಲೋ ಎಲ್ಲೋ ಇದ್ದು ಬಂದ ತನ್ನ ಹೆಂಡತಿಯನ್ನು ಸ್ವೀಕರಿಸಿದರೆ ಸಮಾಜ ತನ್ನನ್ನು ದೂರುವುದು ಎಂದು ತಿಳಿದಿದ್ದ ಭಟ್ಟರು ಹೆಂಡತಿಯನ್ನು ನೆಪ ಮಾತ್ರಕ್ಕೆ ಹುಡುಕಿ ಬರುತ್ತಾರೆ. ಅನಂತರ ಲಕ್ಷ್ಮಮ್ಮ ತನ್ನ ಬದುಕನ್ನು ತಾನೇ ಕಟ್ಟಿಕೊಳ್ಳಲು ನಿರ್ಧರಿಸುತ್ತಾಳೆ. ಪುನರ್ವಸತಿ ಕೇಂದ್ರದಿಂದಲೇ ತಮಗೊಂದು ಆಶ್ರಯವನ್ನು ಪಡೆದುಕೊಂಡು ತಾನೇ ದುಡಿದು ತನ್ನ ಬದುಕನ್ನು ಸಾಗಿಸುತ್ತಾಳೆ. ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುತ್ತಾಳೆ. ಭಟ್ಟರ ವಿಚಾರ ಚರ್ಚಿಸುತ್ತ ಮಾತನಾಡುತ್ತಿರುವಾಗಲೇ " ಆಯುಷ್ಯವೆಲ್ಲಾ ಎಲ್ಲೆಲ್ಲೋ ಬಳಿದು ಬಾಯಿಲೆ ಹತ್ತಿಸಿಕೊಂಡು ಬರುವ 'ಯಜಮಾನರ' ಜೊತೆ ಸಂಸಾರ ಮಾಡುವ ಹೆಂಗಸರು ಎಷ್ಟು ಬೇಕು"[7] ಎಂದು ನಿರೂಪಕಿ ಮತ್ತು ಅವಳ ಸಂಬಂಧಿಕರು ಪುರುಷ ಸಮಾಜದ ಧೋರಣೆಯನ್ನು ಟೀಕಿಸುತ್ತಾರೆ. ಹೆಣ್ಣಿಗಿರುವ ತಾಳ್ಮೆ, ಸಹಿಸಿಕೊಳ್ಳುವ ಗುಣ ಗಂಡಿಗೆ ಇಲ್ಲ. ತಾನು ಏನು ಮಾಡಿದರು ಸರಿ ಅದೇ ಆಕಸ್ಮಿಕವಾಗಿ ಕೂಡ ಹೆಣ್ಣು ದಾರಿ ತಪ್ಪಿದರೆ ಅದು ದೊಡ್ಡ ಅಪರಾಧವಾಗುತ್ತದೆ. ಕ್ಷಮೆಗೂ ಕೂಡ ಹೆಣ್ಣು ಅರ್ಹಳಲ್ಲ ಎಂಬಂತೆ ಗಂಡಸು ವರ್ತಿಸುತ್ತಾನೆ. ಇಲ್ಲಿ ಈ ಸಮಾಜವು ಪುರುಷರ ಹಿತವನ್ನು ಕಾಯುವ ಮತ್ತು ಮಹಿಳೆಯರನ್ನ

ವಂಚಿಸುವ, ಪುರುಷ ಸಮಾಜದ ನಯವಂಚನೆಯ, ಸೋಗಿನ ಸ್ವರೂಪವಿದೆ. ಈ ಸೋಗಿನ ಮುಖವಾಡವನ್ನು ಬಯಲುಗೊಳಿಸುವ ಪ್ರಯತ್ನವನ್ನು ವೈದೇಹಿಯವರು ಈ ಕತೆಯಲ್ಲಿ ಮಾಡಿದ್ದಾರೆ. ಇಂಥ ಸೋಗಿನ ಗಂಡಸರೊಂದಿಗೆ ನಾವು ಬದುಕಲಾರೆವು ಎಂಬ ಪ್ರತಿಭಟನೆಯನ್ನು ಭಟ್ಟರ ಹೆಂಡತಿಯಾದ ಲಕ್ಷ್ಮಮ್ಮನ ಪಾತ್ರ ಸ್ಪಷ್ಟಪಡಿಸುತ್ತದೆ.

ವ್ಯವಸ್ಥಿತ ಸಮಾಜ ದುರ್ಬಲರನ್ನು ಶೋಷಿಸುವ ಒಂದು ಮಾದರಿಯನ್ನು ವೈದೇಹಿಯವರ 'ಚಿಕ್ಕನ ಸತ್ಯಾಗ್ರಹ' ಎಂಬ ಕತೆಯಲ್ಲಿ ಕಾಣಬಹುದು ಕತೆಯ ಮುಖ್ಯ ಪಾತ್ರವಾದ ಚಿಕ್ಕ ಅವರಿವರ ಮನೆಕೆಲಸ ಮಾಡಿ ಜೀವನ ಸಾಗಿಸುತ್ತಿರುತ್ತಾಳೆ. ಆರ್ಥಿಕವಾಗಿ ದುರ್ಬಲಳಾದ ಇವಳಿಗೆ ಯಾರ ಬೆಂಬಲವೂ ಇರುವುದಿಲ್ಲ. ಗಂಡನಿಗೂ ಕಾಯಿಲೆ ಬಂದು ಕೆಲಸ ಮಾಡಲಾಗದ ಸ್ಥಿತಿಯಲ್ಲಿರುತ್ತಾನೆ. ಮಗ ದುಡಿದರೂ ಅವನ ಬದುಕನ್ನು ಮಾತ್ರ ನೋಡಿಕೊಳ್ಳುತ್ತಾನೆ. ಅವನ ಊಟ ಹೆಂಡಕ್ಕೆ ಅವನ ದುಡಿಮೆ ಸಾಕಾಗುತ್ತದೆ. ಆದ್ದರಿಂದ ಚಿಕ್ಕ ತನ್ನ ಮಗಳನ್ನು ಕೂಡ ದುಡಿಮೆಗೆ ಹಚ್ಚುತ್ತಾಳೆ. ಇಷ್ಟಾದರು ಅವಳು ಆರ್ಥಿಕವಾಗಿ ಸಬಲಳಾಗಲು ಸಾಧ್ಯವಾಗದೇ ಹಣಕ್ಕಾಗಿ ಪರದಾಡುತ್ತಾಳೆ. ಹೀಗಿರುವಾಗ ಚಿಕ್ಕನ ಮನೆಯ ಎದುರೆ ಶ್ರೀಮಂತರೊಬ್ಬರು ದೊಡ್ಡ ಬಂಗಲೆಯನ್ನು ಕಟ್ಟಿಸುತ್ತಾರೆ. ಅದನ್ನು ಕಂಡ ಚಿಕ್ಕ ಸಂತೋಷ ಪಡುತ್ತಾಳೆ. ಏಕೆಂದರೆ ತನ್ನ ಕೆಲಸದ ಸಾಮಾರ್ಥ್ಯವನ್ನು ಕಂಡು ಶ್ರೀಮಂತರ ಮನೆಯವರು ತನ್ನನ್ನು ಕೆಲಸಕ್ಕೆ ಕರೆಯುತ್ತಾರೆ. ಇದರಿಂದಾಗಿ ಮನೆಯ ಕಷ್ಟ ಸ್ವಲ್ಪವಾದರೂ ಪರಿಹಾರವಾಗಬಹುದು ಎಂದುಕೊಂಡು, ತಾನು ಅವರ ಮನೆಗೆ ಕೆಲಸಕ್ಕೆ ಹೋದ ಹಾಗೆ ಅಲ್ಲಿ ಕೆಲಸವನ್ನು ಮಾಡಿದ ಹಾಗೆ ಹಲವು ರೀತಿಯ ಕನಸನ್ನು ಕಾಣುತ್ತಾಳೆ.



ಶ್ರೀಮಂತರ ಮನೆ ಕಟ್ಟುವ ಕೆಲಸ ಪೂರ್ತಿ ಆದ ನಂತರ ಚಿಕ್ಕನ ಕಷ್ಟ ಮತ್ತಷ್ಟು ಹೆಚ್ಚಾಗುತ್ತದೆ. ಅವರು ತಿಂದು ಉಂಡು ಉಳಿದ ಎಂಜಲನ್ನೆಲ್ಲ ಜೊತೆಗೆ ಮನೆಯ, ತೋಟದ ಕಸವನ್ನೆಲ್ಲ ಚಿಕ್ಕ ಮನೆ ಬಾಗಿಲಿಗೆ ಎಸೆಯುತ್ತಾರೆ. ಜೊತೆಗೆ ಚಿಕ್ಕನನ್ನು ಕೆಲಸಕ್ಕೂ ಕರೆಯುವುದಿಲ್ಲ. ಚಿಕ್ಕನ ಮನೆಯವರನ್ನು ಕಂಡರೆ ಅಸತ್ಯವೆಂಬಂತೆ ನೋಡುತ್ತಾರೆ. ಇದರಿಂದ ಬೇಸರಗೊಂಡ ಚಿಕ್ಕ ಒಮ್ಮೆ ತಿರುಗಿ ನಿಲ್ಲುತ್ತಾಳೆ. ಆ ಸಂದರ್ಭದಲ್ಲಿ ಶ್ರೀಮಂತರ ಮನೆಯ ಗಂಡಸೊಬ್ಬ ಬಂದು ಚಿಕ್ಕನ ಮನೆಯವರೆಲ್ಲರನ್ನು ಕೊಲ್ಲುತ್ತೇನೆ ಎಂದು ಹೆದರಿಸುತ್ತಾನೆ. ಇದರಿಂದ ಹೆದರಿದ ಚಿಕ್ಕ ಬೇರೆ ದಾರಿ ಕಾಣದೇ ಶ್ರೀಮಂತರ ಮನೆಯಿಂದ ಬಂದು ತನ್ನ ಅಂಗಳದಲ್ಲಿ ಬಿದ್ದ ಕಸವನ್ನೆಲ್ಲ ತಾನೆ ಎತ್ತಿ ಮುನಿಸಿಪಾಲಿಟಿಯ ಕಸದ ತೊಟ್ಟಿಗೆ ಹಾಕುತ್ತಾಳೆ, ಅಸಹಾಯಕ ಪರಿಸ್ಥಿತಿಯಲ್ಲಿರುವ ಅವಳ ನೆರವಿಗೆ ಯಾರು ಬರುವುದಿಲ್ಲ. ಅವಳನ್ನು ಶೋಷಿಸುವುದೇ ಶ್ರೀಮಂತರ ಕೆಲಸವಾಗುತ್ತದೆ ಇದರಿಂದ ಮಾನಸಿಕವಾಗಿ ಹಿಂಸೆಗೆ ಒಳಗಾಗುತ್ತಾಳೆ ತನ್ನ ಕಷ್ಟವನ್ನೆಲ್ಲ ತಾನು ಕೆಲಸಮಾಡುತ್ತಿರುವ ಮನೆ ಯಾಜಮಾನಿಯಾದ ಸುವರ್ಣಮ್ಮನೊಡನೆ ಹೇಳಿಕೊಳ್ಳುತ್ತಾಳೆ:

> "ಬಾಯಿಗ್ ಒಂದ್ ಶಬ್ದೊ ಆಡ್ದೆ, ಯೆಂಚ್ಲ್ ಕಸೊ ಅದ್ಯೇನೇನ್ ಬಿಸಾಕ್ತ್ರೊ ಯಲ್ಲ ಯೆತ್ಯೆತ್ತಿ ಮುಸ್ಸಿಪಾಲ್ಟಿ ತೊಟ್ಟಿಗ್ ಬಿಸಾಕ್ತಿ. ಹಾಕ್ದ್ ಹಾಂಗೂ ಬಿಸಾಕ್ತಿ. ಹಾಕ್ದಾಂಗೂ..... ನನ್ ಕೂಡೆ ಎಷ್ಟ್ ದಿವ್ಸೊ ತಡೂಕಾತ್ತೊ ಅಷ್ಟ್ ದಿವ್ಸೊ....."[8]

ಶ್ರೀಮಂತರು ನೇರ ವಬ್ಬಾಳಿಕೆಯ ಎದುರಿನಲ್ಲಿ ಬಡ ಹೆಣ್ಣಿನ ಮೌನ ಪ್ರತಿಭಟನೆಯು ಈ ರೀತಿ ವ್ಯಕ್ತವಾಗಿದೆ. ಶ್ರೀಮಂತ ಉದ್ದೇಶವೆಂದರೆ ತಾವು ಈ ರೀತಿ ಹಿಂಸಿಸಿದರೆ ಚಿಕ್ಕ ಮನೆ ಖಾಲಿ ಮಾಡಿ ಹೋಗುಬಹುದು ಕೊಳಕು ಮುರುಕಲು ಮನೆ ತಮ್ಮ ಮನೆಯ ಎದುರಿಗೆ ಇರುವುದರಿಂದ ತಮ್ಮ ಮನೆಯ ಸೌಂದರ್ಯ ಹಾಳಾಗುತ್ತದೆ ಆದ್ದರಿಂದ ಚಿಕ್ಕನ ಸಂಸಾರವನ್ನು ಒಕ್ಕಲೆಬ್ಬಿಸಿದರೆ ಆ ಸ್ಥಳವನ್ನು ತಮ್ಮದನ್ನಾಗಿ ಮಾಡಿಕೊಳ್ಳಬಹುದಾಗಿದೆ. ಆದರೆ ಚಿಕ್ಕ ಅವರು ಯಾವ ಕುತಂತ್ರಕ್ಕೂ ಬೆದರಿಕೆಗೂ ಹೆದರದೆ ಇದೇ ಸ್ಥಳದಲ್ಲಿ ಸಾಯುವವರೆಗೂ ವಾಸಿಸುತ್ತೇನೆ ಎನ್ನುತ್ತಾಳೆ.

ಸಾವಿನ ಅಂಚಿನಲ್ಲಿರುವ ತಾಯಿಯ ಪ್ರತೀಕ್ಷೆ, ನಿರೀಕ್ಷೆಗಳ ಸೂಕ್ಷ್ಮ ಸಂವೇದನೆಯ ವಸ್ತು ಪ್ರತಿರೂಪದಲ್ಲಿ ಮಾನವೀಯ ಸಂಬಂಧಗಳ ಶೋಧವನ್ನು **'ಮರ ಗಿಡ-ಬಳ್ಳಿ'** ಎಂಬ ಕತೆಯಲ್ಲಿ ಕಾಣಬಹುದಾಗಿದೆ. ಸಮಾಜದಲ್ಲಿ ಮಾನವೀಯ ಸಂಬಂಧಗಳು ಹೇಗೆ ಕುಸಿಯುತ್ತಿವೆ ಮತ್ತು ಎಲ್ಲವನ್ನು ಲಾಭದ ದೃಷ್ಟಿಯಿಂದ ಯೋಚಿಸಲಾಗುತ್ತಿದೆ ಎಂಬುದನ್ನು ಈ ಕತೆ ವಿಶ್ಲೇಷಿಸುತ್ತದೆ.

ತುಕ್ಕು ಹಿಡಿದ ಸಾಂಪ್ರದಾಯಿಕ ಮೌಲ್ಯಗಳ ಪೊಳ್ಳು ಪ್ರತಿಷ್ಠೆಗಳನ್ನು ಬಯಲು ಮಾಡುವ, ಲೈಂಗಿಕ ಅಸಮಾನತೆಯ ಬಗ್ಗೆ ಇರುವ ಸಾಮಾಜಿಕ ಎಚ್ಚರ, ಹೆಣ್ಣಿನ ಅಂತರಂಗದ ಬದುಕು-ಕೊರತೆ, ನಿರಾಸೆ, ಹುಚ್ಚು ಆಶಯಗಳು **"ಅಕ್ಕು"** ಕತೆಯ ವಸ್ತುವಾಗಿದೆ. ಇಲ್ಲಿ ಹೆಣ್ಣಿನ ಸಹಜ ಬಯಕೆಗಳನ್ನು ಸಮಾಜ ನಿಯಂತ್ರಿಸಲು ಪ್ರಯತ್ನಿಸುವುದನ್ನು ಚಿತ್ರಿಸಲಾಗಿದೆ.

ಕಟು ವಾಸ್ತವದ ಎದುರಲ್ಲೇ ನಿಂತು ಕೂಡ ತನ್ನ ಆತ್ಮಗೌರವವನ್ನು ಕಾಯ್ದುಕೊಳ್ಳುವ ಹೆಣ್ಣಿನ ನಿಲುವು **"ಶಕುಂತಲೆಯೊಂದಿಗೆ ಕಳೆದ ಅಪರಾಹ್ನ"** ಎಂಬ ಕತೆಯದು. ಗಂಡು-ಹೆಣ್ಣಿನ ಮುಖಾಮುಖಿ, ಕೌಟುಂಬಿಕ ಬಿಕ್ಕಟ್ಟು, ಸಂಘರ್ಷ ಈ ನೆಲೆಯಲ್ಲಿ ವ್ಯಕ್ತವಾಗುವ ಗಂಡಿನ ನಕರಾತ್ಮಕ ಪ್ರತಿಕ್ರಿಯೆಯನ್ನು ಹಾಗೂ ಹೆಣ್ಣಿನ ಸೂಕ್ಷ್ಮ ಪ್ರತಿಭಟನೆಗಳನ್ನು ಈ ಕತೆ ಒಳಗೊಂಡಿದೆ.

**'ಸಂ-ಸಾರ'** ದ ನಾಯಕಿ ತನ್ನ ಬದಲಾದ ಪಾತ್ರಗಳಲ್ಲಿ ತನಗೆ ಗೊತ್ತಿಲ್ಲದಂತೆಯೇ, ತಾನೇ ಕಳೆದುಹೋಗುವ ಚಿತ್ರ ಬರುತ್ತದೆ. **"ವರ್ತುಲ"** ಕತೆಯಲ್ಲಿ ತನ್ನ ಸ್ಥಿತಿಯನ್ನು ಕ್ರಮೇಣ ಅರಿಯುವ ಹೆಣ್ಣಿನ ಭಾವ ಚಿತ್ರಣವಿದೆ. ಆದರೆ ಈ ಹಂತದಲ್ಲಿ ಸಮಸ್ಯೆಗಳೂ ಸರಳ, ಅವುಗಳ ಪರಿಹಾರವೂ ಸುಲಭ. ಒಂದು ದಾಂಪತ್ಯ ಅದರೊಳಗೆ ಹೆಣ್ಣು ಸುರಕ್ಷಿತ ಎಂಬಂತಹ ಸಾಮಾಜಿಕ ಕಲ್ಪನೆಗೂ ಮೀರಿದ ಬದುಕಿನ ಚಿತ್ರಣವನ್ನು ಕಾಣಬಹುದು.

ಹೀಗೆ ಹೆಣ್ಣಿನ ವಿಶಿಷ್ಟವಾದ ದೃಷ್ಟಿಕೋನದಿಂದ ಬದುಕನ್ನು ಗ್ರಹಿಸುವ ವೈದೇಹಿಯವರು ಆತ್ಮವಿಮರ್ಶೆಯೊಂದಿಗೆ ಸಾಮಾಜಿಕ ರೀತಿ ನೀತಿಗಳ ವಿಶ್ಲೇಷಣೆಯೂ ಸೇರಿ ಅಂತಹ ಗ್ರಹಿಕೆಯನ್ನು ಸಮಗ್ರವಾಗಿಸುವ ಪ್ರಯತ್ನದತ್ತ ಹಲವಾರು ಕತೆಗಳನ್ನು ರಚಿಸಿದ್ದಾರೆ. ಸಂಪ್ರದಾಯಬದ್ಧ ಸಮಾಜದ ರೀತಿ ರಿವಾಜುಗಳಿಗೆ ವಿರುದ್ಧವಾಗಿ ಪ್ರತಿಕ್ರಿಯಿಸುವ ಹೆಣ್ಣಿನ ಮನೋಧರ್ಮವನ್ನು ಚಿತ್ರಿಸಿದ್ದಾರೆ.

"ಒಂದು **ಕಳ್ಳ ವೃತ್ತಾಂತ", "ಹಕ್ಕಿಲ್ಲದವರು", "ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು"** ಮೊದಲಾದ ಕತೆಗಳಲ್ಲಿ ಸಮಕಾಲೀನ ಸಮಾಜದ ವಸ್ತುಸ್ಥಿತಿಯನ್ನು ಧೈರ್ಯದಿಂದ ಎದುರಿಸಿ ತಮ್ಮ ಅಸ್ತಿತ್ವವನ್ನು

ಸ್ಥಾಪಿಸಿಕೊಳ್ಳಲು ಯತ್ನಿಸುವ ಸ್ತ್ರೀತ್ವದ ಚಿತ್ರಣಗಳನ್ನು ಕಾಣಬಹುದಾಗಿದೆ. ಹಳೆಯ ಸಂಪ್ರದಾಯ, ಪದ್ಧತಿ, ಮೌಲ್ಯ, ನಂಬಿಕೆಗಳ ಬಗ್ಗೆ ಪ್ರಶ್ನೆ, ಶೋಧನೆ, ಹೊಸ ವಿಚಾರಗಳ ಸ್ವೀಕಾರ, ಹಳೆಯ ವಿಚಾರಗಳ ಜೀವನಾನುಭವ, ಬದುಕಿನ ಬಗ್ಗೆ ತೀವ್ರವಾದ ಗ್ರಹಿಕೆ, ಹೊಸಬಾಳಿನ ಬಗ್ಗೆ ಉತ್ಕಟವಾದ ಹಂಬಲ, ಆರೋಗ್ಯಕಾರಿ ಸಮಾಜದ ನಿರ್ಮಾಣದತ್ತ ಒಲವು ಇವುಗಳನ್ನು ಆಶಯವಾಗಿಟ್ಟುಕೊಂಡು ವೈದೇಹಿಯವರು ಕತೆಗಳನ್ನು ರಚಿಸಿರುವುದು ಗೋಚರವಾಗುತ್ತದೆ. ಬದಲಾಗುತ್ತಿರುವ ಸಾಮಾಜಿಕ ಸನ್ನಿವೇಶಗಳಲ್ಲಿ ನತದೃಷ್ಟ ಸ್ತ್ರೀಯರು ಏನು ಮಾಡಬೇಕು? ಎಂಬ ಪ್ರಶ್ನೆಗೆ, ಭಾವನಾತ್ಮಕ ಹಾಗೂ ಬೌದ್ಧಿಕ ಪಾತಳಿಯ ವ್ಯಕ್ತಿ ವಿಶಿಷ್ಟವಾದ ಪ್ರತಿಕ್ರಿಯೆಯನ್ನು ವೈದೇಹಿಯವರ ಕತೆಗಳ ಸ್ತ್ರೀಪಾತ್ರಗಳು ನೀಡುತ್ತವೆ.

ಹೀಗೆ ಸ್ತ್ರೀ ಸಂದರ್ಭಗಳಲ್ಲಿ ವಿವಾಹ ಮತ್ತು ಕುಟುಂಬ ಸಂಸ್ಥೆಗಳು ಅವಳನ್ನು ಸಂಪೂರ್ಣವಾಗಿ ಹೇಗೆ ನಿಯಂತ್ರಿಸಿಬಿಟ್ಟಿವೆ. ಆಕೆಯ ಜೀವನದ ಎಲ್ಲಾ ವಿಚಾರಗಳು ಒಂದಲ್ಲ ಒಂದು ಬಗೆಯಲ್ಲಿ ಹೇಗೆ ಇದರೊಂದಿಗೆ ತಳುಕು ಹಾಕಿಕೊಂಡಿರುತ್ತವೆ. ಆತ್ಮಸಾಕ್ಷಿ, ದೈವಸಾಕ್ಷಿ, ಧರ್ಮಸಾಕ್ಷಿ, ಪಾವಿತ್ರತೆ, ನೈತಿಕತೆ ಮುಂತಾದ ಪಾರಂಪರಿಕ ಮೌಲ್ಯಗಳು ಹಾಗೂ ಇವುಗಳು ವಿವಾಹ ಹಾಗೂ ಕೌಟುಂಬಿಕ ಸಂಬಂಧಗಳ ಸಂದರ್ಭಗಳಲ್ಲಿ ಸ್ತ್ರೀ ಮೇಲೆ ಹೇರಿದ ತಾರತಮ್ಯದ ಸಂಸ್ಥೆಗಳಾಗಿ ಹೇಗೆ ಕಂಡುಬರುತ್ತವೆ ಎಂಬುದನ್ನು ವೈದೇಹಿಯವರ ಕತೆಗಳು ಪರಿಶೀಲಿಸುತ್ತವೆ. ಸ್ತ್ರೀಯರಿಗೆ ವಿವಾಹವನ್ನು ಸ್ವೀಕರಿಸಬೇಕೆ ಬೇಡವೇ ಎಂಬ ನಿರ್ಧಾರದಿಂದ ಹಿಡಿದು ಸಂಗಾತಿಯ ಆಯ್ಕೆ, ವಿವಾಹ–ಪುನರ್‌ವಿವಾಹ ಹಾಗೂ ವಿವಾಹೇತರ ಸಂಬಂಧಗಳನ್ನು ಬೆಳೆಸಿಕೊಳ್ಳುವ ಇತ್ಯಾದಿಗಳೆಲ್ಲದರಲ್ಲೂ ಸ್ವಾತಂತ್ರ್ಯ ಇಲ್ಲದಿರುವುದನ್ನು ಇಲ್ಲಿ ಪ್ರಶ್ನೆಗೆ ಒಳಪಡಿಸಲಾಗಿದೆ.

**ಅಡಿಟಿಪ್ಪಣಿ:–**

೧) ಅಲೆಗಳಲ್ಲಿ ಅಂತರಂಗ, ವೈದೇಹಿಯವರ ಸಮಗ್ರ ಕತೆಗಳ ಸಂಕಲನ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ, ೨೦೦೬, ಪುಟ– ೨೫

೨) ಅದೇ – ಪುಟ – ೨೯

೩) ಅದೇ – ಪುಟ – ೬೬೭

೪) ಅದೇ – ಪುಟ – ೬೬೯

೫) ಅದೇ – ಪುಟ – ೫೩೧

********

# ಅಧ್ಯಾಯ – ೪

## ಲಿಂಗರಾಜಕಾರಣದ ನೆಲೆ

ಭಾರತೀಯ ಸಮಾಜದಲ್ಲಿ ಲಿಂಗಾಧಾರಿತ ಅಸಮಾನತೆಯನ್ನು ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಮೊದಲಿನಿಂದಲೂ ಸ್ತ್ರೀಯರು ಎದುರಿಸುತ್ತಾ ಬಂದಿದ್ದಾರೆ. ಲಿಂಗತಾರತಮ್ಯದ ಈ ಧೋರಣೆ, ದೌರ್ಜನ್ಯ ಹಾಗೂ ಶೋಷಣೆಗಳನ್ನು ಗುರುತಿಸುತ್ತಾ ಈ ಪ್ರವೃತ್ತಿಗಳನ್ನು ನಿವಾರಣೆ ಮಾಡಲು ನಡೆಸುವ ಪ್ರಜ್ಞಾಪೂರ್ವಕವಾದ, ಪ್ರಾಮಾಣಿಕವಾದ ಪ್ರಯತ್ನವನ್ನು 'ಸ್ತ್ರೀವಾದಿ' ಸಂಕಥನ ಮಾಡುತ್ತಾ ಬಂದಿದೆ. ಸ್ತ್ರೀಪರವಾದ ವಿಚಾರಗಳ ಬಗ್ಗೆ ಕಾಳಜಿ ತೋರುತ್ತಾ, ಪ್ರತಿಸ್ಪಂದಿಸುತ್ತಾ ಆ ನಿಟ್ಟಿನಲ್ಲಿ ಕ್ರಿಯಾಶೀಲರಾಗುತ್ತಾ, ಸೃಜನಶೀಲ ನೆಲೆಯಲ್ಲಿ ಅಭಿವ್ಯಕ್ತಿಸುವ ಪ್ರಯತ್ನವನ್ನು ವೈದೇಹಿ, ಜಾಹ್ನವಿ, ಅನುಪಮ ನಿರಂಜನ, ಸಾರಾ ಅಬೂಬಕರ್, ಪ್ರತಿಭಾ ನಂದಕುಮಾರ್ ಮೊದಲಾದ ಲೇಖಕಿಯರು ಮಾಡಿದ್ದಾರೆ. ಈ ಮೂಲಕ ಕನ್ನಡದಲ್ಲಿ ಸ್ತ್ರೀವಾದಿ ಚಳುವಳಿಯನ್ನು ರೂಪಿಸಿದ್ದಾರೆ.

೧೯೪೫ ರಲ್ಲಿ ಪ್ರಕಟವಾದ ಸಿಮೋನ್ ದ ಬುವಾ ಅವರ "ದ ಸೆಕೆಂಡ್ ಸೆಕ್ಸ್" ಕನ್ನಡ ಅನುವಾದದ ಮುನ್ನುಡಿಯಲ್ಲಿ ಡಾ. ಎಚ್. ಎಸ್. ಶ್ರೀಮತಿಯವರು, ಲಿಂಗರಾಜಕಾರಣವನ್ನು ಕುರಿತಂತೆ ಪುರುಷ ಲೇಖಕರೊಬ್ಬರ ವ್ಯಾಖ್ಯಾನವನ್ನು ಹೀಗೆ ಉಲ್ಲೇಖಿಸಿದ್ದಾರೆ. ಬೆಂಡ ಎಂಬ ಪಾಶ್ಚಾತ್ಯ ಚಿಂತಕ ತನ್ನ "ರ‍್ಯಾಪೋರ್ಡ್ ಡಿ ಯುರೀಲ್" ನಲ್ಲಿ "ಗಂಡಸಿನ ದೇಹ ತನ್ನಷ್ಟಕ್ಕೆ ತಾನು ಅರ್ಥಪೂರ್ಣವಾದದು . ಅದಕ್ಕೆ ಹೆಂಗಸಿನೊಡನೆ ಯಾವ ಸಂಬಂಧವೂ ಇಲ್ಲ. ಆದರೆ, ಹೆಂಗಸಿನ ದೇಹಕ್ಕೆ ಹೀಗೆ ಈ ಗುಣಗಳಿಲ್ಲದ ಕೊರತೆ ಇದೆ........ ಗಂಡಸು ಹೆಂಗಸಿಲ್ಲದೆಯೂ ತಾನೇ ತನ್ನ ಬಗ್ಗೆ ಯೋಚಿಸಬಲ್ಲ. ಹೆಂಗಸು ಮಾತ್ರ ಗಂಡಸನ್ನು ಹೊರತುಪಡಿಸಿ ತನ್ನ ಬಗ್ಗೆ ಯೋಚಿಸಲಾರಳು" ಏಕೆಂದರೆ , ಶ್ರೀಮತಿಯವರು ಹೇಳುವ ಹಾಗೆ ಹೆಣ್ಣು ಗಂಡಸಿನಿಂದ ನಿರ್ಧಾರಿತವಾಗುತ್ತಾಳೆ. ಹೀಗಾಗಿ ಆಕೆ ಸದಾ ಲಿಂಗಸಂಬಂಧಿಯಾಗಿಯೇ ನಿರ್ವಚಿತಳಾಗುತ್ತಾಳೆ. ಪುರುಷನಿಗೆ ಅವಳು ಯಾವಾಗಲೂ ಲಿಂಗಸಂಬಂಧಿ ಜೀವಿಯಾಗಿಯೇ ತೋರುತ್ತಾಳೆ . ಆತನ ಪ್ರಕಾರ ಆಕೆ ಒಂದು ಶುದ್ಧಾಂಗವಾದ ಲಿಂಗಜೀವಿ ಮಾತ್ರ. ಆಕೆಯನ್ನು ಗಂಡಸಿನೊಡನೆ ಬೇರ್ಪಡಿಸಿಯೇ ವಿವರಿಸಲಾಗುತ್ತದೆ . ಆದರೆ ಆತನನ್ನು ವಿವರಿಸುವಾಗ ಆಕೆಯ ಉಲ್ಲೇಖ ಅಗತ್ಯವಾಗದು. ಆಕೆಯೊಂದು ಆಕಸ್ಮಿಕ ಸಾರರೂಪಿಯಾದ ಗಂಡಸಿಗೆ ಹೋಲಿಸಿದಾಗ ನಗಣ್ಯಳು ಆತ ಕರ್ತೃ. ಆತ ಪರಿಪೂರ್ಣ, ಆಕೆ ಅನ್ಯ."[೧]

ಸಿಮೋನ್ ದ ಬುವಾಳ 'ದ ಸೆಕೆಂಡ್ ಸೆಕ್ಸ್' ಕೃತಿಯಲ್ಲಿ 'ಸ್ತ್ರೀಯು ಮೂಲತಃ ರೂಪಿಸಲ್ಪಟ್ಟವಳು ಹೆಣ್ಣು ನಿರ್ದಿಷ್ಟ ಸಾಮಾಜಿಕ ಪ್ರಕ್ರಿಯೆಗಳಿಂದ 'ಆಗುತ್ತಾಳೆ' ಯೇ ವಿನಾ ಯಾರೂ 'ಹೆಣ್ಣಾಗಿ' ಯೇ ಹುಟ್ಟುವುದಿಲ್ಲ. ಸ್ತ್ರೀತ್ವವನ್ನು ಅವಳಿಗೆ ಕೊಡಲಾಗುತ್ತದೆ.' ಎಂದು ಬುವಾ ಹೇಳುತ್ತಾಳೆ. ಈ ಬಗೆಯ ಚಿಂತನೆ ಲಿಂಗಪ್ರಭೇದದಂತಹ ಪ್ರಭಾವಶಾಲೀ ಅಧಿಕಾರ ಶಕ್ತಿಯನ್ನು ಪ್ರಶ್ನಿಸುವ ನೈತಿಕ ಧೀಮಂತಿಕೆಯನ್ನು ಹೆಣ್ಣಿಗೆ ನೀಡಿತು. ಜಗತ್ತಿನ ಅನೇಕ ಸ್ತ್ರೀವಾದಿ ಚಿಂತಕರ ಮೇಲೆ ಹಾಗೂ ಲೇಖಕಿಯರ ಮೇಲೆ ಈಕೆಯ ಚಿಂತನೆಗಳು ಪ್ರಭಾವ ಬೀರಿದವು. ಸ್ತ್ರೀವಾದವು ತಾಯ್ತನದ ವೈಭವೀಕರಣವನ್ನು ಹಾಗೂ ತಂದೆತನಕ್ಕೆ ಎರಡನೇ ಸ್ಥಾನಕೊಟ್ಟು ಪತ್ನಿತ್ವ ಮತ್ತು ತಾಯ್ತನದ ನಿಗದಿತ ಮಾದರಿಗಳಲ್ಲಿ ಮಾತ್ರ ಸ್ತ್ರೀಯನ್ನು ಕಾಣುವ ಲಿಂಗರಾಜಕಾರಣವನ್ನು ಅಲ್ಲಗಳೆಯುತ್ತದೆ. 'ಅಧಿಕಾರ ಸಂಬಂಧಗಳ ಮೇಲೆ ಮತ್ತು ಲಿಂಗಭೇದ ಸಂಬಂಧಗಳ ಮೇಲೆ ಸಾಮಾಜಿಕ ಅರ್ಥಕಲ್ಪನೆಯು ಹೇಗೆ ಕಟ್ಟಲ್ಪಟ್ಟಿದೆ

ಎನ್ನುವುದರ ಮೇಲೆ ಒತ್ತುಕೊಡುವುದೇ ಸ್ತ್ರೀವಾದಿ ವಿಮರ್ಶೆಯ ವೈಶಿಷ್ಟ್ಯವಾಗಿದೆ' ತಾರತಮ್ಯವಿಲ್ಲದೆ ಜೈವಿಕ ಭಿನ್ನತೆಗಳನ್ನು ತೊಡೆದು ಹಾಕಬೇಕೆಂಬುದು ಸ್ತ್ರೀವಾದದ ಪ್ರಮುಖ ಆಶಯವಾಗಿದೆ. ಪೂರ್ವನಿರ್ಧರಿತವಾದ ಲಿಂಗಭೇದವನ್ನು ಆಧರಿಸಿ ಸ್ತ್ರೀಯನ್ನು ಕುರಿತಾಗಿ ರೂಢಿಯಲ್ಲಿರುವ ಹಲವು ಆದಿಮ ಪ್ರತಿಮೆಗಳನ್ನು ಒಡೆಯುವ ಕಾರ್ಯವನ್ನು ವೈದೇಹಿಯವರು ತಮ್ಮ ಬರಹಗಳಲ್ಲಿ ಪ್ರಯತ್ನಿಸಿದ್ದಾರೆ. ಸ್ತ್ರೀಯನ್ನು ಅವಳಿರುವಂತೆಯೆ ಗುರುತಿಸುವ ಪ್ರಯತ್ನವನ್ನು ಕೈಗೊಳ್ಳುವುದು ಸ್ತ್ರೀವಾದದ ಪ್ರಧಾನ ಉದ್ದೇಶವೂ ಆಗಿದೆ. ಈ ದ್ವಿಲಿಂಗಿ ದೃಷ್ಟಿಕೋನವು ಸ್ತ್ರೀ ಪುರುಷರಿಬ್ಬರಲ್ಲೂ ಇರಬೇಕಾದ ಪ್ರಜ್ಞೆ ಎಂದು ಹೇಳುವ ಸ್ತ್ರೀವಾದ ಅಂತಿಮದಲ್ಲಿ ಮನುಷ್ಯ ಮನುಷ್ಯರ ನಡುವಿನ ಸಮಾನತೆಯನ್ನು ಬಯಸುವಂತಹದಾಗಿದೆ ಮತ್ತು ವ್ಯಕ್ತಿತ್ವದ ಸಹಜ ವಿಕಾಸಕ್ಕಾಗಿ ಒತ್ತಾಯಿಸುತ್ತಾ ಬಂದಿದೆ.

ಸ್ತ್ರೀಕೇಂದ್ರಿತ ವಿಚಾರ ಪ್ರಣಾಳಿಯ ಮೂಲದಲ್ಲಿರುವ ಕೆಲವು ಪ್ರಶ್ನೆಗಳನ್ನು ಸ್ತ್ರೀವಾದಿ ಚಿಂತಕರು ಎತ್ತಿದ್ದಾರೆ. ಸ್ತ್ರೀಯರು ಪುರುಷರಿಗಿಂತ ಯಾವ ರೀತಿಯಲ್ಲೂ ಭಿನ್ನರಲ್ಲ ಎಂದು ನಂಬಿ ಪುರುಷರೊಡನೆ ಸಮಾನತೆಗಾಗಿ ಹೋರಾಡಬೇಕೇ? ಅಥವಾ ಪುರುಷನಿಗಿಂತ ಪ್ರಜ್ಞೆಯಲ್ಲಿ, ಪ್ರತಿಸ್ಪಂದನೆಯಲ್ಲಿ ಸ್ತ್ರೀಭಿನ್ನಳಾಗಿದ್ದು, ಈ ಭಿನ್ನತೆಯೇ ಅವಳ ವಿಶಿಷ್ಟ ಶಕ್ತಿಯೆಂದು ಮುಂದುವರಿಯಬೇಕೇ? ಎಂಬ ಪ್ರಶ್ನೆಗಳನ್ನಿಟ್ಟುಕೊಂಡು ವೈದೇಹಿಯವರ ಕಥೆಗಳನ್ನು ಪರಿಶೀಲಿಸಿದಾಗ ಹಲವು ಭಿನ್ನ ಬಗೆಯ ಆಯಾಮಗಳು ಅವರ ಕಥೆಗಳಲ್ಲಿ ವ್ಯಕ್ತವಾಗುತ್ತವೆ. ಸ್ತ್ರೀಯ ಅನುಭವಗಳ ಓನ್ನಲೆಯಲ್ಲಿ ಪುರುಷನಿಗಿಂತ ಭಿನ್ನವೆಂದು, ಜೊತೆಗೆ ವಿಶಿಷ್ಟ ಸ್ಥಾನ ಪಡೆದವಳೆಂದು ವೈದೇಹಿಯವರು ಚಿತ್ರಿಸುತ್ತಾರೆ.

ಲಿಂಗರಾಜಕಾರಣವನ್ನು ವಿರೋಧಿಸುವುದನ್ನು ಮತ್ತು ಸ್ತ್ರೀವಾದಿ ಸಿದ್ಧಾಂತಗಳಿಂದ, ಅವುಗಳ ಪ್ರಭಾವದಿಂದ ದೂರವಾಗಿ, ಮುಕ್ತವಾಗಿ ತಮ್ಮದೇ ಆದ ಸ್ತ್ರೀವಾದ ಚಿಂತನಾ ಕ್ರಮವೊಂದನ್ನು ಸೃಷ್ಟಿಸಿಕೊಂಡಿರುವುದನ್ನು ವೈದೇಹಿಯವರ ಕತೆಗಳಲ್ಲಿ ಕಾಣಬಹುದಾಗಿದೆ. ಅವರು "**ಮಲ್ಲಿನಾಥನ ಧ್ಯಾನ**" ಎಂಬ ಕೃತಿಯ 'ನಮ್ಮ ಲೋಕದ ಗೀತೆ' ಎಂಬ ಲೇಖನದಲ್ಲಿ ಹೀಗೆ ಹೇಳುತ್ತಾರೆ. "ಪುರುಷನಿಗೆ ನಾವು ಸಮರಲ್ಲ, ಆದಕ್ಕಿಂತ ಮುಖ್ಯವಾಗಿ ನಮ್ಮ ಸಮಕ್ಕೆ ಪುರುಷರು ಎಂದೂ ಬಂದು ನಿಲ್ಲಲಾರರು. ಎಲ್ಲಿ ಸಮಾನ ಅವಕಾಶಗಳನ್ನು ಪಡೆಯಲಾರೆವೋ ಅಲ್ಲಿ ಹೋರಾಡಿಯಾದರೂ ಒಂದಲ್ಲ ಒಂದು ದಿನ ಸಮಾನ ಅವಕಾಶ ಗಳಿಸಿಕೊಂಡೇವು. ಆದರೆ ತಂತಾನೆ ಲಭ್ಯವಾಗುವ ನಮ್ಮದೇ ಅನುಭವಗಳನ್ನು ಗುರುತಿಸುತ್ತಾ ಗೌರವಿಸುವುದನ್ನು ಬಿಟ್ಟು ಧಿಕ್ಕರಿಸುವುದರಲ್ಲಿ ಏನು ಬಂತು? ನಾವೇಕೆ ಪುರುಷ ದನಿಯಲ್ಲಿ ಮಾತಾಡಬೇಕು ? ನಾವು ನಮ್ಮ ಕಂಠದಲ್ಲಿ ಹಾಡೋಣ, ಅದು ಜೋರಾಗವಿರಲಿ, ಪ್ರೇಮರಾಗವಿರಲಿ ಇನ್ನಾವ ಬಗೆಯ ರಾಗ ವಿರಾಗಗಳೇ ಇರಲಿ, ನಮ್ಮದೇ ದನಿ ಅಲ್ಲಿರಲಿ."[೨]

ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಹೆಣ್ಣು ವೈಯಕ್ತಿಕವಾಗಿ ಅಲ್ಲದೆ, ಸಾಮಾಜಿಕ ಸಂದರ್ಭದಲ್ಲೂ ಒಪ್ಪಿಗತವಾಗಬೇಕಾದ ಅನಿವಾರ್ಯತೆ ಇರುವುದರಿಂದ ಹೆಣ್ಣು ಮತ್ತೆ ಮತ್ತೆ ಪ್ರಶ್ನೆಗಳಿಗೆ ಒಳಪಡುತ್ತಾ ಬಂದಿದ್ದಾಳೆ. ಲಿಂಗಪ್ರಭೇದ ವ್ಯವಸ್ಥೆಯಲ್ಲಿ ಹೆಣ್ಣನ್ನು ನಿರಂತರವಾದ ದೈಹಿಕ ದುಡಿಮೆಗೆ ಹಚ್ಚುವ ಮೂಲಕ ಆಕೆಯ ಎಲ್ಲಾ ಬೌದ್ಧಿಕ ಚಿಂತನೆ ಮತ್ತು ಸೃಜನಶೀಲತೆಯನ್ನು ಹತ್ತಿಕ್ಕಲಾಗಿದೆ. ಆಕೆಯ ಕೌಟುಂಬಿಕ ಮತ್ತು ಮದುವೆ, ಲೈಂಗಿಕತೆ, ತಾಯ್ತನದಂತಹ ವೈಯಕ್ತಿಕ ಪ್ರಶ್ನೆಗಳಲ್ಲೂ ಹೆಣ್ಣಿಗೆ ತನ್ನ ದನಿಯನ್ನು ಪ್ರಕಟಿಸುವ ಅವಕಾಶ ಇಲ್ಲದಾಗಿ ಇಲ್ಲೆಲ್ಲಾ ಗಂಡಿನ "ಬೌದ್ಧಿಕ ಶಕ್ತಿ"ಯ ಪೂರ್ಣ ನಿಯಂತ್ರಣಗಳೇ

ಎಂದು ಕಾಣುತ್ತೇವೆ. ಒಂದೇ ಕೌಟುಂಬಿಕ, ಸಾಮಾಜಿಕ ಪರಿಸರದಲ್ಲಿ ಬೆಳೆದ ಗಂಡು-ಹೆಣ್ಣು ಮಕ್ಕಳಿಗೆ ಒದಗುವ ಸಂದರ್ಭ ಸಿಗುವ ಒತ್ತಾಸೆ, ಭರವಸೆಗಳು, ದಕ್ಕುವ ಅನುಭವ, ಅವಕಾಶಗಳು ವಿಭಿನ್ನವಾಗಿರುತ್ತವೆ. ಹೀಗೆ ಭಿನ್ನವಾದ ಒಂದು ಸಾಂಸ್ಕೃತಿಕ ಸಂದರ್ಭದಲ್ಲಿ ಬದುಕಬೇಕಾದ ಹೆಣ್ಣಿನ ಕನಸು, ಬಯಕೆ ಮತ್ತು ಗ್ರಹಿಕೆಗಳು ಬೇರೆಯಾಗಿರುತ್ತವೆ. ಜಗತ್ತನ್ನು ಕಾಣುವ ಅನುಭವಿಸುವ ಮತ್ತು ಅಭಿವ್ಯಕ್ತಿಸುವ ಪುರುಷ ಸಂವೇದನೆಗೂ ಹೆಣ್ಣೊಬ್ಬಳ ಪರಿಗ್ರಹಿಕೆ ಹಾಗೂ ಅಭಿವ್ಯಕ್ತಿ ವಿನ್ಯಾಸಕ್ಕೂ ಅಂತರವಿರುವುದನ್ನು ವೈದೇಹಿಯವರ ಕತೆಗಳು ಪರಿಶೀಲಿಸುತ್ತವೆ.

ಪುರುಷ ಪ್ರಧಾನ ವ್ಯವಸ್ಥೆಯು ಲಿಂಗವೆಂಬುದರ ಬಗ್ಗೆ ಏಕಮುಖ ಚಿಂತನೆಯನ್ನು ರೂಪಿಸಿತು. ಮಹಿಳೆಯರ ಹಿತಾಸಕ್ತಿಗಳನ್ನು ಪುರುಷ ಹಿತಾಸಕ್ತಿಗಳಿಗೆ ಅಧೀನವಾಗಿಸಿರುವ ಅಧಿಕಾರ ಸಂಬಂಧಗಳಿರುವುದನ್ನು ಈ ವ್ಯವಸ್ಥೆಯು ಸೂಚಿಸುತ್ತದೆ. ಇಲ್ಲಿ ಪುರುಷನನ್ನೇ ಕೇಂದ್ರವಾಗಿಟ್ಟುಕೊಳ್ಳಲಾಯಿತು. ಪುರುಷ ಲಿಂಗದ ಆಧಾರದ ಮೇಲೆ ತನ್ನನ್ನು ಉನ್ನತ ದರ್ಜೆಯಲ್ಲಿ ಗುರುತಿಸಿಕೊಂಡನು ಮತ್ತು ಮಹಿಳೆಯನ್ನು ಕೆಳದರ್ಜೆಯಲ್ಲಿ ನಿಲ್ಲಿಸಿ ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಕಟ್ಟಿಹಾಕಿ ಶೋಷಣೆಗೆ ಗುರಿಪಡಿಸಿದನು. ಅಲ್ಲದೆ ಲಿಂಗ, ಲಿಂಗವ್ಯವಸ್ಥೆ, ಲೈಂಗಿಕತೆ ಇತ್ಯಾದಿಗಳೆಲ್ಲವನ್ನು ಒಂದೇ ಅರ್ಥದಲ್ಲಿ ಬಳಸಲಾಗುತ್ತಿತ್ತು.

ಈ ಬಗೆಯ ಲಿಂಗರಾಜಕಾರಣವನ್ನು ಪುರುಷ ರೂಪಿಸಲು ಇರುವ ಮುಖ್ಯ ಕಾರಣ ತಾನು ಉನ್ನತನೆಂದು, ಮಹಿಳೆಯನ್ನು ಕೆಳಗಿನವಳೆಂದು ಬಿಂಬಿಸಿ ಅವಳನ್ನು ತನ್ನ ಹಿಡಿತಕ್ಕೆ ಬಗ್ಗಿಸಿಕೊಳ್ಳುವುದಾಗಿತ್ತು. ನಂತರದಲ್ಲಿ ಮಹಿಳೆ ಎಂದರೆ ಹೀಗಿರಬೇಕು, ಪುರುಷನ ಗುಣಗಳು ಇವು ಎಂದು ರೂಪಿಸುವುದಾಗಿದೆ. ಇವುಗಳನ್ನು ಬಿಟ್ಟು ಒಬ್ಬರಿಗೊಬ್ಬರು ಪರಸ್ಪರ ಬೇರೆಯ ಗುಣಗಳ ಆಧಾರದ ಮೇಲೆ ಬದುಕುವ ಪ್ರಯತ್ನವನ್ನು ಮಾಡಬಾರದು. ಹಾಗೇನಾದರೂ ಮಾಡಿದರೆ ಅವಳು ತನ್ನ ಲಿಂಗಕ್ಕೆ ಮಾಡುವ ದೊಡ್ಡ ಅಪರಾಧ ಎಂಬ ರೀತಿಯಲ್ಲಿ ಪುರುಷ ಪ್ರಧಾನ ವ್ಯವಸ್ಥೆಯಿಂದ ರೂಪಿತಗೊಂಡ ಲಿಂಗವ್ಯವಸ್ಥೆಯು ಬಿಂಬಿಸಿತು. ಜೊತೆಯಲ್ಲಿ ಅವಳಿಗೆ ಇಂತಹ ಮೌಲ್ಯಗಳನ್ನು ತುಂಬಿ ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಕಟ್ಟಿಹಾಕುವ ಪ್ರಯತ್ನವನ್ನು ಮಾಡಿತು. ಇಲ್ಲಿ ಮಹಿಳೆಯ ಬಾಲ್ಯ, ಯೌವ್ವನ, ವೃದ್ಧಾಪ್ಯ ಎಲ್ಲ ಸಂದರ್ಭದಲ್ಲಿಯು ಪುರುಷನ ಜೊತೆಯಲ್ಲೇ, ಅವನ ದೃಷ್ಟಿಗೆ ಅನುಗುಣವಾಗಿಯೇ ಬದುಕನ್ನು ನಡೆಸಬೇಕು. ಇಂಥ ಶ್ರೇಣೀಕೃತ ವ್ಯವಸ್ಥೆಯಲ್ಲಿ, ಪುರುಷನ ಪರಮಾಧಿಕಾರದಿಂದಾಗಿ ಮಹಿಳೆಯರಿಗೆ ಮದುವೆ, ತಾಯ್ತನಗಳಲ್ಲಿ ಸ್ವಾತಂತ್ರ್ಯ ಮತ್ತು ಆಯ್ಕೆಯ ಹಕ್ಕು ಇಲ್ಲದಿರುವುದನ್ನು ಕಾಣಬಹುದಾಗಿದೆ.

ಈ ರೀತಿಯ ಲಿಂಗರಾಜಕಾರಣದ ಹಲವು ನೆಲೆಗಳನ್ನು ವೈದೇಹಿಯವರ ಕತೆಗಳಲ್ಲಿ ಗುರುತಿಸಬಹುದಾಗಿದೆ. ಇವರ **"ಗೂಡಿನೊಳಗೆ ಒಂದು ಹಕ್ಕಿ"** ಎಂಬ ಕತೆಯಲ್ಲಿ ಹಾಸ್ಯದ ಲೇಪನದೊಂದಿಗೆ ಚಿಂತನೆಗೆ ಹಚ್ಚುವಂತ, ಲಿಂಗರಾಜಕಾರಣವನ್ನು ಅಲ್ಲಗಳೆಯುವಂತಹ ಪ್ರಯತ್ನವಿದೆ. ಪರಂಪರಗತವಾಗಿ ಬಂದ ಆಚರಣೆಯ ನೆಪದಲ್ಲಿ ಹೆಣ್ಣು ಹೀಗೇ ಇರಬೇಕು ಎಂಬ ಪುರುಷಾಧಿಕಾರದ ನೆಲೆಗಳನ್ನು ನಿರಾಕರಿಸುವುದನ್ನು ಕಾಣಬಹುದಾಗಿದೆ. ಇಲ್ಲಿ ಕತೆಯ ನಾಯಕಿ ಮಾಲತಿಗೆ ಒಂದು ದಿನವಾದರೂ ತನಗೆ ಇಷ್ಟ ಬಂದ ಹಾಗೆ, ಯಾರ ನಿರ್ಬಂಧವೂ ಇಲ್ಲದೆ, ಸ್ವೇಚ್ಛೆಯಾಗಿ ಬದುಕಬೇಕು ಎಂಬ ಆಸೆ ಚಿಗುರುತ್ತದೆ. ಅದಕ್ಕಾಗಿ ಗಂಡನಿಗೆ ಮನೆಯ ಹೊರಗಿನಿಂದ ಬೀಗ ಹಾಕಿ ತನ್ನನ್ನು ಒಳಗೆ ಬಿಟ್ಟು ಹೋಗಬೇಕೆಂದು ಕೇಳುತ್ತಾಳೆ. ಅದಕ್ಕೆ ಕಾರಣವೇನೆಂದು ಅವಳ ಗಂಡ ಕೇಳಿದಾಗ ಒಂದೇ

ರೀತಿಯಲ್ಲಿ ಇದ್ದು ಬೇಸರವಾಗಿದೆ ಎನ್ನುತ್ತಾಳೆ. ಅದರಿಂದ ಆಶ್ಚರ್ಯಗೊಂಡ ಅವನು ಒಂದು ದಿನ ಒಬ್ಬ ಗಂಡಸಿನೊಡನೆ ಇದ್ದು ಬೇಸರ ಎಂದು ಹೇಳುತ್ತಿಯಾ ನೀನು, ನಾನಾಗಿದ್ದಕ್ಕೆ ನಿನ್ನೊಡನೆ ಬದುಕುತ್ತಿದ್ದೇನೆ ಎನ್ನುತ್ತಾನೆ. ಅವನ ಮಾತಿಗೆ ವ್ಯಂಗ್ಯವಾಗಿ ಪ್ರತಿಕ್ರಿಯಿಸುತ್ತಾಳೆ ಮಾಲತಿ. "ಬಾಳಿ ಎಲ್ಲ ಆದ ಮೇಲೆ ಚಿನ್ನದ ಪದಕ ಕೊಡುತ್ತೇನೆ" ಅದಕ್ಕವನು "ಅಷ್ಟರೊಳಗೆ ನೀನು ಹೋಗಿಬಿಟ್ಟರೆ ?" ಎಂದಾಗ ಅವಳು ಕೂಡ "ನೀವೇ ಒಂದು ವೇಳೆ ಪೆಟ್ಟಿಗೆ ಕಟ್ಟಿದರೆ ?" ಎನ್ನುತ್ತಾಳೆ. ಇಲ್ಲಿ ಗಂಡನ ಮಾತಿಗೆ ತಕ್ಷಣ ಪ್ರತಿಕ್ರಿಯಿಸುವ, ಅವನ ಧಾಟಿಯನ್ನೇ ತಾನು ಬಳಸುವ ಅವಳು ಅವನ ವ್ಯಂಗ್ಯಕ್ಕೆ ಹೆದರದೆ ತನಗೂ ಮಾತನಾಡುವ ಹಕ್ಕಿದೆ ಎಂಬುದನ್ನು ಸಾಬೀತುಪಡಿಸುವ ರೀತಿಯಲ್ಲಿ ಮಾತನಾಡುತ್ತಾಳೆ. ಅವಳ ದಿಟ್ಟತನವನ್ನು ಕಂಡ ಗಂಡ ಈ ರೀತಿ ಹೇಳುತ್ತಾನೆ. "ಅಬ್ಬ! ಎಂಥ ಕಾಲ ಬಂತು! ಗಂಡ ಹೀಗೆ ಮಾತಾಡಿದರೆ ಹೆಂಡತಿ ಅವನ ಬಾಯಿಗೆ ಕೈ ಅಡ್ಡ ಇಟ್ಟು ದೇವರಿಗೆ ತುಪ್ಪದ ದೀಪ ಹಚ್ಚಿಡುವ ಕಾಲ ಒಂದಿತ್ತು" ಅವನ ಮಾತಿಗೆ ಪ್ರತ್ಯುತ್ತರವಾಗಿ ಮಾಲತಿ ಹೀಗೆ ಹೇಳುತ್ತಾಳೆ, "ಈಗಲೂ ಕಾಲ ಮಿಂಚಿಲ್ಲ ದೇವರಿಗೆ ತುಪ್ಪದ ದೀಪ ಹಚ್ಚಿಡಲೇ ನಿಮಗೆ ಖುಷಿಯಾಗುವುದಾದರೆ ಹಚ್ಚುತ್ತೇನೆ. ಮತ್ತೆ ನೀವೂ ಹಚ್ಚಬೇಕು ನನ್ನ ಹೆಸರಲ್ಲಿ." [6] ಹೀಗೆ ಗಂಡು-ಹೆಣ್ಣಿನ ಸಂಭಾಷಣೆಯಲ್ಲಿ ಅವರಿಬ್ಬರೂ ಸರಿ-ಸಮಾನವಾಗಿ ತಮ್ಮ ಅಭಿಪ್ರಾಯಗಳನ್ನು ಹಂಚಿಕೊಳ್ಳುವುದನ್ನು ಇಲ್ಲಿ ಕಾಣಬಹುದಾಗಿದೆ. ಇಲ್ಲಿ ಹೆಣ್ಣನ್ನು ಸಂಪ್ರದಾಯದ ಹೆಸರಿನಲ್ಲಿ ಶೋಷಣೆಗೆ ಒಳಪಡಿಸುವ ವಿಧಾನವನ್ನು ಪ್ರಶ್ನಿಸುವ, ಪ್ರತಿಭಟಿಸುವ ಗುಣವನ್ನು ಮಾಲತಿಯ ಪಾತ್ರದ ಮೂಲಕ ಲೇಖಕಿ ಅನಾವರಣಗೊಳಿಸಿದ್ದಾರೆ.

**'ತರಂಗಗಳು'** ಎಂಬ ಕತೆಯಲ್ಲಿ ಹೆಣ್ಣಿನ ಆಸೆ ಕನಸುಗಳು ಯಾವ ಬಗೆಯದು ಎಂಬುದನ್ನು ಚಿತ್ರಿಸಲಾಗಿದೆ. ಯಾವ ಹಂಗಿನರಮನೆ ಪುರಷನ ಅಧಿಕಾರದ ನಿಂಯತ್ರಣವಿಲ್ಲದೇ ಸ್ವತಂತ್ರವಾಗಿ ಬದುಕಬೇಕು ಎಂದು ಕತೆಯ ನಾಯಕಿ ಆಸೆ ಪಡುತ್ತಾಳೆ: ಸ್ವತಂತ್ರ್ಯವಾಗಿ ಬದುಕುವ ನೆಲೆಗಡಲೆ ಮಾರುವವನನ್ನು ನೆನೆದು ತನಗೂ ಅಂತಹ ಬದುಕಿನ ಅವಶ್ಯಕತೆ ಇದೆ ಎಂದುಕೊಳ್ಳುತ್ತಾಳೆ. ಏಕೆಂದರೆ "ಅವನು ಒಂದು ಕೈಯಿಂದ ಗಾಡಿ ದೂಡಿಕೊಂಡು ಇನ್ನೊಂದರಿಂದ ನಿಗಿನಿಗಿ ಕೆಂಡದ ಮೇಲೆ ಇರಿಸಿದ ಬಾಣಲೆಗೆ ಸೌಟು ಬಡಿಯುತ್ತ ಗಿರಾಕಿಗಳನ್ನು ಆಹ್ವಾನಿಸುತ್ತ ಸಶಬ್ದವಾಗಿ ನೆಲಗಡಲೆ ಕಾಳುಗಳನ್ನು ಹುರಿಯುತ್ತ ಬದುಕು ಸಾಗಿಸುವ ಎದೆಗಾರಿಕೆ ಅವನದು." [7] ಅವನ ಎದೆಗಾರಿಕೆ, ಸ್ವತಂತ್ರವಾಗಿ ಬದುಕುವ ಛಲ ಅವಳಿಗೆ ಇಷ್ಟವಾಗುತ್ತದೆ. ತಾನು ಮಾಡುತ್ತಿರುವ ಕೆಲಸದ ಬಗ್ಗೆ ಯಾವ ಕೀಳರಿಮೆಯು ಇಲ್ಲದೆ ಜನರ ಮಧ್ಯೆಯೇ ಹಿಂಜರಿಕೆ ಇಲ್ಲದೆ ಬದುಕುವ ಅವನ ಜೀವನ ಕ್ರಮವನ್ನು ತನ್ನ ಬದುಕಿನೊಂದಿಗೆ ಹೋಲಿಸಿಕೊಂಡು ತನಗಿಲ್ಲದ ಸ್ವಾತಂತ್ರ್ಯಕ್ಕಾಗಿ ಹಂಬಲಿಸುತ್ತಾಳೆ.

ತನ್ನ ಕಾಲೇಜಿನ ಗೆಳತಿಯನ್ನು, ಕಾಲೇಜು ಪೇದೆಯನ್ನು ನೆನಪಿಸುತ್ತ ಅವರ ಜೀವನ ಕ್ರಮವನ್ನು ವಿಶ್ಲೇಷಿಸುತ್ತಾಳೆ. ಕಾಲೇಜಿನ ಟೈಪಿಸ್ಟನ ಹೆಂಡತಿಯು ಯಾವಾಗಲು ಬಸುರಿ ಅಥವಾ ಬಾಣಂತಿಯಾಗಿರುತ್ತಿದ್ದಳು. ಯಂತ್ರದ ಹಾಗೆ ಮಕ್ಕಳನ್ನು ಹಡೆಯುತ್ತಿರುತ್ತಾಳೆ. ಇಲ್ಲಿ ಹೆಣ್ಣಿನ ಜೀವನಪಿಡೀ ಮಕ್ಕಳನ್ನು ಹಡೆಯುವುದರಲ್ಲಿ ಅವುಗಳನ್ನು ಬೆಳೆಸುವುದರಲ್ಲೇ ಕಳೆದು ಹೋಗುತ್ತದೆ. ಹೆಣ್ಣಿಗೆ ಅವಳದೇ ಆದ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಅವಕಾಶವೇ ದೊರೆಯದ ಹಾಗೆ ಪುರುಷ ಸಮಾಜ ಅವಳನ್ನು ಮಕ್ಕಳನ್ನು ಹೆರುವುದಕ್ಕೆ ಮತ್ತು ಮನೆಗೆಲಸಕ್ಕೆ ಸೀಮಿತಗೊಳಿಸಿರುವುದನ್ನು ನಿರೂಪಕಿ ವ್ಯಂಗ್ಯ ಮಾಡುವುದನ್ನು ಕಾಣಬಹುದಾಗಿದೆ.

ವೈದೇಹಿಯವರ **"ಅಮ್ಮಚ್ಚಿಯೆಂಬ ನೆನೆಪು"**– ಒಬ್ಬ ತಂದೆಯಿಲ್ಲದ ಹುಡುಗಿಯ ಕತೆ. ಅಮ್ಮಚ್ಚಿಯ ತಾಯಿ ಸೀತತ್ತೆ ಗಂಡ ಸತ್ತ ನಂತರ ತನ್ನ ಮನೆಯ ಕೆಲಸ ಕಾರ್ಯಗಳಿಗೆಲ್ಲ ವೆಂಕಪ್ಪ ಎಂಬ ಹುಡುಗನನ್ನು ಅವಲಂಬಿಸಿದ್ದಳು. ಈ ನೆಪವಲ್ಲಿ ಬಂದು ಅವರ ಮನೆ ಸೇರಿದವನು ಬೆಳೆಯುತ್ತ ಹೋದ ಹಾಗೆ ವೆಂಕಪ್ಪಯ್ಯನೆನಿಸಿಕೊಂಡನು. ಅಮ್ಮಚ್ಚಿಯನ್ನು ಮದುವೆಯಾಗುವವನು ಎಂದು ಊರಿನಲ್ಲಿ ಪ್ರಚಾರ ಮಾಡುತ್ತಾನೆ. ಅವಳ ಹಕ್ಕುದಾರನಾಗಿ ಅವಳ ನಡುವಳಿಕೆಯನ್ನು ನಿಯಂತ್ರಿಸುವ ಅಧಿಕಾರವನ್ನು ಚಲಾಯಿಸಲು ಪ್ರಯತ್ನಿಸುತ್ತಾನೆ. ಅಮ್ಮಚ್ಚಿಯ ಅಲಂಕಾರ ಅವಳ ಓಡಾಟ ಎಲ್ಲದರಲ್ಲೂ ತನ್ನದೇ ಮಾತು ನಡೆಯಬೇಕೆಂಬ ಧೋರಣೆಯನ್ನು ಹೊಂದಿರುತ್ತಾನೆ. ಇದನ್ನೆಲ್ಲ ಮೀರಬಯಸುವ ಅಮ್ಮಚ್ಚಿ ತನ್ನದೇ ಆದ ರೀತಿಯಲ್ಲಿ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾಳೆ. ಒಂದು ದಿನ ಅವಳು ಪೇಟೆಗೆ ಹೊರಟು ನಿಂತಾಗ ಅವಳನ್ನು ಪ್ರಶ್ನಿಸುತ್ತಾನೆ, ಹೋಗದಂತೆ ತಡೆಯಲು ಪ್ರಯತ್ನಿಸುತ್ತಾನೆ ವೆಂಕಪ್ಪಯ್ಯ. ಅದಕ್ಕವಳು "ನೀ ಹೋವುಯಾ ಕೋಮಣ ಬಿಟ್ಟಿಂಡ್ ಬೆಕಾರೂ. ನಾ ಕೆಣ್ತ್ನ? ನಾ ನಂಗೆ ಬೇಕಾದ ಹಾಂಗೆ ಹೊರಟರೆ ನಿಂಗೆ ಯಾಕೆ ಕಿಚ್ಚು ?"[೫] ಎನ್ನುತ್ತಾಳೆ. ಇಲ್ಲಿ ಅವನ ಮಾತಿಗೆ ಎದುರುತ್ತರ ಕೊಡುವ ಅಮ್ಮಚ್ಚಿ ಅವನ ನಿಯಂತ್ರಣವನ್ನು ಮೀರುವ, ತನ್ನ ಅಸ್ತಿತ್ವವನ್ನು ಸ್ಥಾಪಿಸುವ ಪ್ರಯತ್ನ ಮಾಡುತ್ತಾಳೆ. ತನ್ನ ಮನಸ್ಸಿಗೆ ಎಷ್ಟೇ ನೋವಾದರೂ ಅಳುವುದು ತನ್ನ ದೌರ್ಬಲ್ಯವಲ್ಲ ಎಂಬುದನ್ನು ಸಾಧಿಸಿ ತೋರಿಸುತ್ತಾಳೆ.

ಒಮ್ಮೆ ತನ್ನ ರವಿಕೆಯನ್ನು ಹಾಳುಮಾಡಿದ ವೆಂಕಪ್ಪಯ್ಯನ ಮೇಲೆ ಸಿಟ್ಟುಗೊಂಡ ಅಮ್ಮಚ್ಚಿ ಅವನು ತಿರುಪತಿಗೆ ಹೋದ ಸಂದರ್ಭದಲ್ಲಿ ಅವನ ಕೋಣೆಗೆ ಹೋಗಿ "ಹೋ ವೆಂಕಪ್ಪಯ್ಯ ಎರಡೂ ಕೈ ಅಲ್ಲಾಡಿಸಿಂಡ್ ಗೂಟಲೆ ನೇತಾಡ್ತ್‌ದ್ ಕಾಣೆಯ"[೬] ಎಂದು ಹೇಳಿ ನಗುತ್ತಾಳೆ. ಅವನ ಶರ್ಟನ್ನು ಮುಟ್ಟಲೇ ಅಸಹ್ಯವೆಂಬಂತೆ ದೂರದಿಂದ ಕೈನೀಡಿ ಅಲ್ಲಿಂದ ತೆಗೆದಳು. ಅಮ್ಮನಿಗೆ ತಿಳಿಯದಂತೆ ಕತ್ತರಿ, ಸೂಜಿ, ನೂಲು ತರಿಸಿ ವೆಂಕಪ್ಪಯ್ಯನ ಶರ್ಟಿನ ಹಿಂಬದಿಯನ್ನು ಕತ್ತರಿಸಿ ಮುಂಭಾಗವನ್ನು ಹೊಲೆದು ಅಲ್ಲಿನ ಗುಂಡಿಗಳನ್ನು ಹಿಂಭಾಗದಲ್ಲಿ ಹೇಗೆ ಹೇಗೋ ಇಡುತ್ತಾಳೆ. ಇಲ್ಲಿ ಅಮ್ಮಚ್ಚಿಯ ಬಂಡಾಯದ ಪ್ರಜ್ಞೆ ವ್ಯಕ್ತವಾಗಿರುವುದನ್ನು ಕಾಣಬಹುದು. ತಿರುಪತಿಗೆ ಹೋಗಿ ಬಂದ ವೆಂಕಪ್ಪಯ್ಯ ಅವಳ ಮೇಲೆ ಸಿಟ್ಟುಗೊಂಡು ಬಲತ್ಕರಿಸುತ್ತಾನೆ. ಇಲ್ಲಿ ತನ್ನ ಗಂಡಿನ ದರ್ಪವನ್ನು ವೆಂಕಪ್ಪಯ್ಯ ಮೆರೆಯುತ್ತಾನೆ. ಅವನ ಅತ್ಯಚಾರಕ್ಕೊಳಗಾದ ಅಮ್ಮಚ್ಚಿ ಅವನನ್ನೇ ಮದುವೆಯಾಗಿ ತನಗಿಷ್ಟವಿಲ್ಲದ ಬದುಕನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಲಿಂಗದ ಕಾರಣದಿಂದಾಗಿಯೇ ಲೈಂಗಿಕ ನೆಲೆಯಲ್ಲಿ ಶೋಷಣೆಗೆ ಒಳಪಟ್ಟ ಹೆಣ್ಣಿನ ನೋವು ಈ ಕತೆಯಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದಾಗಿದೆ.

**"ಹಕ್ಕಿಲ್ಲದವರು"** ಕತೆಯ ನಾಯಕಿ ಸಿರಿ ಗಂಡಸಿನ ಹಾಗೆ ದುಡಿಯುವವಳು. ಗಂಡು ನಿರ್ವಹಿಸುವ ಎಲ್ಲ ಕೆಲಸಗಳನ್ನು ತಾನೇ ನಿರ್ವಹಿಸುವಷ್ಟು ಸಮರ್ಥಳು. ದ್ವೀಪದಂತೆ ಇರುವ ತನ್ನ ಮನೆ, ತೋಟದಲ್ಲಿ ಗೆಯ್ಯುವುದೇ ಅವಳ ದಿನನಿತ್ಯದ ಕೆಲಸ. ಒಂದು ದಿನ ಅವಳ ಜೊತೆಯವರೇ ಆದ ಸಂಬಂಧಿಕರು ಮನೆಗೆ ಬಂದಾಗ ತನ್ನಲ್ಲಿ ಹಲವು ಕೊರತೆಗಳಿದೆ ಎಂದು ಅನಿಸುತ್ತದೆ. ಅವರ ಹಾಗೆ ತನ್ನಲ್ಲಿ ಬಣ್ಣಬಣ್ಣದ ಉಡುಗೆ–ತೊಡುಗೆಗಳಿಲ್ಲ, ಆಭರಣಗಳಿಲ್ಲ, ಅವರ ದೇಹದ ನಾಜೂಕು ತನ್ನಲ್ಲಿಲ್ಲವಲ್ಲ ಎಂದು ಕುಗ್ಗಿ ಹೋಗುತ್ತಾಳೆ. ಅದರೊಂದಿಗೆ ಸಿರಿಯ ತಾಯಿ ದಿನ ಒಂದೇ ರೀತಿಯ ಅಡುಗೆ ಮಾಡುತ್ತಾಳೆ ಎಂದು ತನ್ನ ವಯಸ್ಸಿನವಳೇ ಆದ ಮಾಧುರಿಯ ಹತ್ತಿರ ದೂರಿದಾಗ ಸಿರಿ ತನ್ನ ಮನಸ್ಸಿನಲ್ಲೇ ನೊಂದುಕೊಳ್ಳುತ್ತಾಳೆ. ಬೇಸರವನ್ನು, ಕೋಪವನ್ನು ಕಣ್ಣೀನಲ್ಲೇ ವ್ಯಕ್ತಪಡಿಸುತ್ತಾಳೆ.

"ಮನೆಯಲ್ಲೇ ಮುಚ್ಚಟೆಯಾಗಿ ಕುಳಿತು, ಗಂಡ ತಂದ ಸಂಪಾದನೆಯಲ್ಲಿ ಜೀವನ ಕಳೆಯುವ ಇವರೇ ಶ್ರೇಷ್ಠರು; ಎಲ್ಲರ ದೃಷ್ಟಿಯಲ್ಲಿಯೂ, ಸಂಪಾದನೆ ಮಾಡದ, ಪ್ರೀತಿಯೆಂದರೆ ದೇಹ ಎಂದುಕೊಂಡಂತಹ ಗಂಡಸನ್ನು ಕಟ್ಟಿಕೊಂಡು, ಗಂಡು ಬಲವಿಲ್ಲದ ನೋವನ್ನು ಒಳಗೆ ನುಂಗಿ, ತೋಟ, ಗದ್ದೆ ಎಂದು ಇಪ್ಪತ್ತನಾಲ್ಕು ಗಂಟೆ ದುಡಿಯುವಂತಹ ತಾನು– ಏನು ಅಲ್ಲ! ಅಮ್ಮನ ಕಣ್ಣಲ್ಲಿಯೂ!"[2] ಎಂದು ಸಿರಿ ಅಂದುಕೊಳ್ಳುತ್ತಾಳೆ.

ತೋಟ ಮನೆಯನ್ನೆಲ್ಲ ಒಂದು ಹದಕ್ಕೆ ತರುವವರೆಗೆ ಸುಮ್ಮನಿದ್ದ ಸಿರಿಯ ಅಣ್ಣ ನಂತರ ಬಂದು ಅದರ ಮೇಲಿನ ಹಕ್ಕು ತನ್ನದೆಂದು ತೋಟ ಮನೆಯನ್ನು ತನಗೆ ಕೊಡಬೇಕೆಂದು ರೇಗುತ್ತಾನೆ. ವಯಸ್ಸಾದ ತಾಯಿಯನ್ನು ಮನಸ್ಥಿಮಿತದಲ್ಲಿಲ್ಲದ ತಂಗಿ ರಾಧೆಯನ್ನು ಸಾಕಲು ಆಗುವುದಿಲ್ಲ. ಪಾಳು ಬಿದಿದ್ದಾಗ ತೋಟದ ಕಡೆ ಗಮನ ಹರಿಸಲಿಲ್ಲ. ಯಾವ ಕರ್ತವ್ಯವನ್ನು ಮಾಡದವನು ತೋಟವು ಸುಸ್ಥಿತಿಗೆ ಬಂದು ಅದರಿಂದ ಲಾಭ ಬರುತ್ತದೆ ಎಂದಾಗ ತನ್ನ ಹಕ್ಕನ್ನು ಸ್ಥಾಪಿಸಲು ಬರುತ್ತಾನೆ. ಇಲ್ಲಿ ಪುರುಷರ ಸ್ವಾರ್ಥ ಬುದ್ಧಿ, ಹೆಣ್ಣನ್ನು ಶೋಷಿಸುವ ಮನಸ್ಥಿತಿಯನ್ನು ಮಾತ್ರ ಸ್ಥಾಪಿಸಬಯಸುವ ಗಂಡಸಿನ ಏಕಪಕ್ಷೀಯ ನಿಲುವನ್ನು ಕಾಣಬಹುದಾಗಿದೆ.

ಗಂಡನು ಜವಬ್ದಾರಿಯನ್ನು ನಿರ್ವಹಿಸದೇ ಸಿರಿಯನ್ನು ಅವಳ ಮಕ್ಕಳನ್ನು ಬಿಟ್ಟು ಹೋಗುತ್ತಾನೆ. ಅಣ್ಣನು ಕೂಡ ಹಾಗೆಯೇ ಮಾಡುತ್ತಾನೆ. ಸಂಬಂಧಿಕರು ಸಹ ಯಾವ ಸಹಾಯವನ್ನು ಮಾಡಲು ಮುಂದಾಗುವುದಿಲ್ಲ. ಆದರೂ ತಾನು ನಿಂತ ನೆಲೆಗೆ ಬದ್ಧವಾಗಿದ್ದೂ ಆಂತರಿಕ ಸತ್ವದಿಂದ ಪ್ರೇರಿತಳಾದ ಸಿರಿ ಆರೋಗ್ಯಪೂರ್ಣ ನಿಲುವುಗಳನ್ನು ವ್ಯಕ್ತಪಡಿಸುವ ಸ್ತ್ರೀ ಪಾತ್ರವಾಗಿ, ಪುರುಷ ನಿರ್ಮಿತ ಸಮಾಜದ ದಿಗ್ಬಂಧನಗಳನ್ನು ಮೀರಲೆಳೆಸುವ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾಳೆ. ಈ ಕತೆಯಲ್ಲಿ ಲಿಂಗಧಾರಿತ ಅಸಮಾನತೆಯನ್ನು ಪರಿಶೀಲಿಸುವ ಚಿತ್ರಣವಿದೆ.

**"ಮನೆಯುವರೆಗಿನ ಹಾದಿ"** ಎಂಬ ಕತೆಯಲ್ಲಿ ಕುಟುಂಬದಲ್ಲಿ ಆದ ಬದಲಾವಣೆಯಿಂದ ಹೆಣ್ಣಿನ ಸ್ಥಾನಮಾನದಲ್ಲಾದ ಬದಲಾವಣೆಯ ಚಿತ್ರಣವಿದೆ. ಕತೆಯ ಪ್ರಮುಖ ಪಾತ್ರಗಳಲ್ಲಿ ಒಂದಾದ ರುಕ್ಮಿಣತ್ತೆಗೆ ಗಂಡನ ಮನೆಯಾಡಳಿತದ ಸಂದರ್ಭದಲ್ಲಿ ದೊರೆಯದ ಸ್ವತಂತ್ರ್ಯ ಮಗನಿಗೆ ಅಧಿಕಾರ ಬಂದ ಸಂದರ್ಭದಲ್ಲಿ ದೊರೆಯುವುದನ್ನು ನೋಡಬಹುದು. ಕಾಲಾಂತರದಲ್ಲಿ ಬದಲಾಗುವ ಸಾಮಾಜಿಕ ಪರಿಸ್ಥಿತಿಯೊಂದಿಗೆ ಆಧುನಿಕತೆಯ ಪ್ರಭಾವದಿಂದ ಹೆಣ್ಣಿನ ಜೀವನ ಕ್ರಮದಲ್ಲಾಗುವ ಬದಲಾವಣೆಯನ್ನು ಗುರುತಿಸಬಹುದಾಗಿದೆ.

"ಏನ್ ಬೇಕಾದ್ರೂ ನಿನ್ ಮಾವಯ್ಯನ್ ಎದ್ರಿಗ್ ಕೈ ಮುಂದೆ ಮಾಡೀ ಮಾಡೀ ಅವ್ರ್ ತನಿಖಿ ತಾರಮ್ಮಯ್ಯ ಕಂಡ್ ಕ್ಂಡ್ ಜೀಂವ್ ಹೋದ್ರ್ ಸಾಕ್ ಆಂಬಷ್ಟಾಯಿದ್ದಿತ್. ಈಗ ಅಡ್ಡಿಲ್ಲೆ ವಾಸ್ತೇವ ವೈವಾಟ್ ವೈಸ್ಕಂಡಿದ್ದ. ಹಿಂಡಿ, ಬೂಸ ಎಲ್ಲ ತಂದ್ ಹಾಕ್ತ. 'ಮನಿ ಖರ್ಚಿಗ್ ಆಯಿ ಉಳ್ದ್ ಹಾಲು ನೀನ್ ಯಂತ ಬೇಕಾರೂ ಮಾಡ್ಕೊ ಅಮ್ಮ, ಅದ್ ನಿಂಗೆ'– ಅಂದಿದ."[3] ಎಂದು ರುಕ್ಮಿಣತ್ತೆ ಮಗನ ಮನೆಯಾಡಳಿತದ ಬಗ್ಗೆ ತಮ್ಮ ಸಮಾಧಾನವನ್ನು ವ್ಯಕ್ತಪಡಿಸುತ್ತಾರೆ. ಅವರು ಗಂಡನ ಅಧಿಕಾರ, ದರ್ಪ, ಪ್ರಶ್ನೆ, ತನಿಖೆಗಳಿಂದ ಬೇಸತ್ತು ಜಿಗುಪ್ಸೆಗೊಂಡು ಒಮ್ಮೆ ಸತ್ತುಹೋದರೆ ಸಾಕು ಎಂದುಕೊಳ್ಳುತ್ತಾರೆ. ನಂತರ ಅಧಿಕಾರಕ್ಕೆ ಬಂದ ಮಗ ತಾಯಿಗೆ ಅವಳದೇ ಆದ ಆಸೆ ಆಕಾಂಕ್ಷೆಗಳನ್ನು ವ್ಯಕ್ತಪಡಿಸಲು, ಪೂರೈಸಿಕೊಳ್ಳಲು ಅವಕಾಶ ಕೊಡುತ್ತಾನೆ. ತಮ್ಮ ಮನೆಗೆ ಹೋಗಲು ಬರಲು ರಸ್ತೆ ಮಾಡಿಸುತ್ತಾನೆ. ಆಧುನಿಕತೆಯ ಪ್ರಭಾವದಿಂದ ಅವರ ಜೀವನ ಕ್ರಮದಲ್ಲಿ ಹಲವು ಬದಲಾವಣೆಗಳಾಗುತ್ತವೆ. ಈಗ ರುಕ್ಮಿಣತ್ತೆಗೆ ಆರ್ಥಿಕ ಸ್ವತಂತ್ರ್ಯ ದೊರೆತು ಬದುಕು ಸ್ವಲ್ಪವಾದರೂ ಸಹ್ಯವಾಗಿದೆ ಎಂದೆನಿಸುತ್ತದೆ. ತನಗೆ

ಬೇಕಾದ್ದನ್ನು ಕೊಳ್ಳಲು, ಬೇಕಾದಂತೆ ಖರ್ಚುಮಾಡಲು ದೊರೆತ್ತದ್ದೆ ಅವರಿಗೆ ಸಂಭ್ರಮದ ವಿಷಯವಾಗುತ್ತದೆ. ಇಲ್ಲಿ ಸ್ವತಂತ್ರ್ಯಕ್ಕಾಗಿ ಹಂಬಲಿಸುವ ಹೆಣ್ಣಿನ ಮನಸ್ಥಿತಿಯನ್ನು, ಅದನ್ನು ಪಡೆದಾಗ ಅವಳು ಪಡುವ ನೆಮ್ಮದಿಯನ್ನು ಈ ಕತೆಯಲ್ಲಿ ಚಿತ್ರಿಸಲಾಗಿದೆ.

ಇದೆ ಕತೆಯ ಮತ್ತೊಂದು ಸಂದರ್ಭದಲ್ಲಿ ಪಿತೃರೂಪಿ ಸಮಾಜದ ಯೋಚನಕ್ರಮವನ್ನು, ನಿಯಂತ್ರಣವನ್ನು ಕಾಣಬಹುದಾಗಿವೆ. ಕತಾನಾಯಕಿ ತಾನು ಒಬ್ಬಳೇ ಬಂದುದ್ದಾಗಿ ಹೇಳಿದಾಗ ಅವಳ ಮಾವಯ್ಯ ಈ ರೀತಿ ಹೇಳುತ್ತಾನೆ. "ಎಳೀ ಪುಡ್ಗಿ ಅಲ್ವಿರೆ? ಹೆಣ್ಣ್ ಹೆಂಗ್ಸ್ ಅಲ್ದ? ಒಬ್ಬೇ ತಿರ್‍ಗಕಾಗ....... ಅಪ್ಪಯ್ಯ ರಸ್ತೆ ಮಾಡಿಸ್ಲಿಲ್ಲೆ ಯಾಕ್ ಮತ್ತೆ? ಹೆಂಗ್ಸ್‌ರೆಲ್ಲ ಒಬ್ಬೊಬ್ರೇ ತಿರುಗು ಧೈರ್ಯ ಮಾಡ್ರೊ ಅಂತೆಳಿಯೇ......."[6] ಇಲ್ಲಿ ಹೆಂಗಸರು ಒಬ್ಬೊಬ್ಬರೇ ಎಲ್ಲೂ ಹೋಗಬಾರದು. ಹೆಣ್ಣು ಗಂಡಿನ ಆಶ್ರಯದಲ್ಲೇ ಇರಬೇಕು ಅದನ್ನು ಮೀರಲೂ ಯತ್ನಿಸಬಾರದು ಗಂಡಿನ ಬೆಂಬಲವಿದ್ದರೆ ಮಾತ್ರ ಹೆಣ್ಣು ಸುರಕ್ಷಿತವಾಗಿ ಇರಲು ಸಾಧ್ಯವೆಂಬ ಧೋರಣೆಯನ್ನು ಕಾಣಬಹುದು. ಸುರಕ್ಷಿತತೆಯ ನೆಪವೇಳಿ ಹೆಣ್ಣಿನ ವರ್ತನೆಯನ್ನು ನಿಯಂತ್ರಿಸಿ ತಮಗೆ ಹೊಂದಿಕೆಯಾಗುವಂತೆ ರೂಪಿಸಿಕೊಳ್ಳುವ ಪುರುಷ ಸಮಾಜದ ಲಿಂಗರಾಜಕಾರಣವನ್ನು ಲೇಖಕಿ ಇಲ್ಲಿ ಗುರುತಿಸಿದ್ದಾರೆ.

"ಶತಮಾನಗಳಿಂದ ಸ್ತ್ರೀಯ ದೇಹವನ್ನು ಲೈಂಗಿಕ ಶೋಷಣೆಗೆ ಗುರಿ ಮಾಡುವ ಪ್ರವೃತ್ತಿ ಎಲ್ಲ ಸಮಾಜಗಳಲ್ಲೂ ಬಹು ಹಿಂದಿನಿಂದ ಕಂಡುಬರುತ್ತದೆ. ಆಕೆ ದೈಹಿಕವಾಗಿ ದುರ್ಬಲಳು ಎಂಬ ನೆಪವನ್ನು ಮುಂದಿಟ್ಟುಕೊಂಡು ಆಕೆಯ ದೇಹವನ್ನು ಹಿಂಸೆ ಮತ್ತು ಕ್ರೌರ್ಯಗಳಿಗೆ ವಸ್ತುವನ್ನಾಗಿ ಮಾಡಿ ಅವಳ ಮೇಲೆ ಪ್ರಭುತ್ವವನ್ನು ಸ್ಥಾಪಿಸಲು ಪ್ರಯತ್ನಿಸುವುದು ಪುರುಷ ಪ್ರಧಾನ ಸಮಾಜದ ಒಂದು ಪ್ರವೃತ್ತಿಯಾಗಿದೆ."[10]

ವೈದೇಹಿಯವರ "ಖಾಲಿಗೋಡೆ"ಯು ಲಿಂಗಭೇದದ ಭ್ರಮೆಗಳನ್ನು ಗೇಲಿ ಮಾಡುವ ಕತೆಯಾಗಿದೆ. "ಗೋಡೆ ಖಾಲಿಯಾಗಿ ನಿಂತಿತೆಂದರೆ ಅದು ಇರುವುದೇ ಗೋಡೆಯಾಗಿ ಅಡ್ಡವಾಗುವುದಕ್ಕೆ. ಮತ್ತೆ ಯಾತಕ್ಕೂ ಅಲ್ಲ ಎಂಬರ್ಥವಲ್ಲವೆ?" ಆಗ ಥಟಕ್ಕನೆ ಮಗನೆಂದ, ಯಾವುದೋ ಕ್ಲೀಷೆಯನ್ನು ಎತ್ತಿ ಆಡುವ ಅಣುಕು ದನಿಯಲ್ಲಿ 'ಗೋಡೆ ತನ್ನ ಗೋಡೆತನವನ್ನು ಮೀರಬೇಕಾದರೆ ಏನನ್ನಾದರೂ ಧರಿಸಲೇಬೇಕು.' ಆಗ ಹದಿಹರೆಯದ ಮಗಳು 'ಹಾಗೆಲ್ಲ ಹೇಳಬೇಡಿರೋ. ಧರಿಸು ಎಂದೊಡನೆ 'ಗರ್ಭಧರಿಸು' ಎಂಬ ಶಬ್ದದ ನೆನಪಾಗುತ್ತದೆ. ಮತ್ತು ಗೋಡೆಯೆಂದರೆ ಗರ್ಭಕೋಶದ ಭಿತ್ತಿಯ ನೆನಪಾಗುತ್ತದೆ. ಗೋಡೆಯಿದ್ದರೆ ಚಿತ್ತಾರ ಬರೆಯಬಹುದು' ಇತ್ಯಾದಿ ಉದ್ಗಾರಗಳೆಲ್ಲ ನೆನಪಾಗುತ್ತವೆ.[11]

ಈ ಕತೆ ಮೇಲ್ನೋಟಕ್ಕೆ ಒಂದು ಖಾಲಿ ಗೋಡೆಯ ಚಿತ್ರಣವನ್ನು ನೀಡುತ್ತಿದ್ದರು ಅಂತರ್ಯದಲ್ಲಿ ಲಿಂಗ ಸಂಬಂಧದ ಗಂಭೀರವಾದ ಚಿಂತನೆಯನ್ನು ಒಳಗೊಂಡಿದೆ. ಇಲ್ಲಿ ಗೋಡೆ ಎಂದರೆ ಗರ್ಭಕೋಶ ಭಿತ್ತಿಯಾಗಬಹುದು "ಗರ್ಭಧರಿಸು ಎಂಬ ಅರ್ಥವನ್ನು ಹೊಳೆಯಿಸಬಹುದು ಅಂದರೆ ಗೋಡೆ ತನ್ನ ಗೋಡೆತನವನ್ನು ಮೀರಬೇಕಾದರೆ" 'ಏನನ್ನಾದರೂ ಧರಿಸಲೇಬೇಕು' ಎಂದು ಹೇಳುವ ಹುಡುಗನ ಮಾತಿನಲ್ಲಿ ಹೆಣ್ಣು ತನ್ನ ಕನ್ಯಾವಸ್ಥೆಯನ್ನು ಕಳೆದುಕೊಂಡು ತಾಯ್ತನವನ್ನು ಧರಿಸಲೇಬೇಕು ಅದರಲ್ಲೇ ಹೆಣ್ಣಿನ ಸಾರ್ಥಕತೆ ಇರುವುದು ಎಂಬ ಧ್ವನಿಯನ್ನು ಹೊರಡಿಸುತ್ತದೆ.

"ಗೋಡೆ ತುಟಿಯೊಡೆಯದೆ ನಿಂತಿತ್ತು. ಏನೂ ಅಪರಾಧ ಮಾಡದೆಯೂ ಅಪವಾದಕ್ಕೆ ಈಡಾದ ಬಡಪಾಯಿಯಂತೆ"[೧೭] ಎಂಬಲ್ಲಿ ಹೆಣ್ಣು ಏನು ತಪ್ಪು ಮಾಡದೇ ಹೋದರು ಸಮಾಜದ ಕೆಟ್ಟ ದೃಷ್ಟಿಯಲ್ಲಿ ಅಪರಾಧಿಯಾಗುತ್ತಾಳೆ, ಅವಮಾನಕ್ಕಿಡಾಗುತ್ತಾಳೆ. ಅವಳು ವಯಸ್ಸಿಗೆ ಬಂದ ಹೆಣ್ಣಾಗಿದ್ದು ಮದುವೆಯಾಗದೇ ಮನೆಯಲ್ಲೇ ಉಳಿದ್ದಿದ್ದರಂತು ಸಮಾಜದ ಹಲವು ಪ್ರಶ್ನೆಗಳು ಅವಳಲ್ಲಿ ಕೀಳರಿಮೆಯನ್ನು ಮೂಡಿಸುತ್ತವೆ. ಈ ಕತೆಯಲ್ಲಿ ಮಗಳು ನೋಟ್ ಬುಕ್ಕಿನಲ್ಲಿ ಹೀಗೆ ಬರೆಯುತ್ತಾಳೆ. " ಅಪ್ಪಾ, ಉಸಿರುಗಟ್ಟುತ್ತಿದೆ. ನಾನೊಂದು, ಸ್ವತಃ ಚಲಿಸುವ ಗೋಡೆಯೇ ಆಗಿದ್ದೇನೆ. "[೧೮] ಇಲ್ಲಿ ಹೆಣ್ಣು ಸಮಾಜದ ಪ್ರಶ್ನೆಗಳನ್ನು ಎದುರುಸಲಾಗದೇ ಅದರ ಇಕ್ಕಟ್ಟಿನಲ್ಲಿ ತನ್ನನ್ನೇ ಕಳೆದುಕೊಂಡಂತಹ ಭಾವವನ್ನು ತಳೆಯುತ್ತಾಳೆ. ಭಾವನೆಗಳ ಭಾರದಿಂದಾಗಿ ಹಗುರವಾಗಿ ನಿಲ್ಲಲಾಗದ ಪರಿಸ್ಥಿತಿ ಅವಳದ್ದಾಗುತ್ತದೆ ಎಂಬ ಹೆಣ್ಣಿನ ಅಂತರಾಳದ ಅಳಲನ್ನು ಲೇಖಕಿ ಈ ಕತೆಯಲ್ಲಿ ಚಿತ್ರಿಸಿದ್ದಾರೆ.

**"ಪದವೀಧರ"** ಎಂಬ ಕತೆಯಲ್ಲಿ ಕತೆಯ ನಿರೂಪಕನೇ ಕತೆಯ ಮುಖ್ಯ ಪಾತ್ರವಾಗಿದ್ದಾನೆ. ತನ್ನ ಕಾಲೇಜು ದಿನಗಳನ್ನು ಬೇಕಾಬಿಟ್ಟಿಯಾಗಿ ಕಳೆದು ಏನನ್ನು ಕಲಿಯದೆ ಹೋಗುತ್ತಾನೆ. ಅವನ ಪ್ರಕಾರ ಹೆಂಡತಿಯೆಂದರೆ "ನನ್ನ ಮಟ್ಟಿಗೆ ಹೆಂಡತಿಯಾದವಳು ಗಂಡನನ್ನೇ ಪ್ರಶ್ನಿಸುವ ದಿಟ್ಟೆ, ಬುದ್ಧಿವಂತೆಯಾಗಿರದಿದ್ದರೆ ಸರಿ."[೧೯] ಇಲ್ಲಿ ಗಂಡಸು ಹೇಗೇ ಇದ್ದರೂ ಸರಿ ಹೆಣ್ಣಿನ ಮುಂದೆ ತಾನು ಕೀಳೆಂದು ತೋರಿಸಿಕೊಳ್ಳಬಾರದು. ತನ್ನನ್ನು ಹೆಣ್ಣು ಪ್ರಶ್ನಿಸುವಷ್ಟು ದಿಟ್ಟೆಯಾದರೆ ತನ್ನ ದೌರ್ಬಲ್ಯವೆಲ್ಲಿ ತಿಳಿಯುತ್ತದೊ ಎಂಬ ಪಿತೃರೂಪಿ ಸಮಾಜದ ಮೌಲ್ಯವನ್ನು ಪ್ರತಿಬಿಂಬಿಸುವಂತಹ ಪಾತ್ರವಾಗಿ ಕತಾನಾಯಕನ ಚಿತ್ರಣವಿದೆ.

**"ಯಾತ್ರೆ"** ಕತೆಯಲ್ಲಿ ನಾಯಕಿ ತನ್ನ ಬಾಲ್ಯದಿಂದಲೂ ಆದ ಅನುಭವಗಳನ್ನು ಮೆಲುಕು ಹಾಕುತ್ತಾಳೆ. ಜೊತೆಗೆ ಬದುಕಿನ ವಿಮರ್ಶೆ ಮಾಡುತ್ತಾಳೆ. ಅಜ್ಜಿಯ ಮನೆಯ ಪರಿಸ್ಥಿತಿ, ಅಲ್ಲಿ ನಾಗಪ್ಪ ಮಾವಯ್ಯನ ಹೆಂಡತಿಯ ಬದುಕುವ ಕ್ರಮವನ್ನು ನೆನೆಯುತ್ತಾಳೆ. ಅದಕ್ಕೆ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾಳೆ. ಅವಳು ಸಾಯುವವರೆಗೂ ಮಾವನನ್ನು ಎದುರಿಸಿಕೊಂಡೇ ಬದುಕಿದವಳು ಅವನ ಬೈಗಳಗಳನ್ನೆಲ್ಲ ಸಹಿಸಿಕೊಂಡು ತನಗೆ ಇಷ್ಟವಾಗುವ ರೀತಿ ಬದುಕಿದವಳು. " ಪಾಪದವರಿದ್ದರೆ ಮನೆಲೇ ಕೂಡಿಸ್ತು ಜಾತಿ. ಹೆಂಗಸಾಗಿದ್ದಕ್ಕೆ ಅಡ್ತೊತ್ತಗೇ (ಅಡಿಗೆ ಮನೆಯಲ್ಲೇ)ಕುಳ್ಳಣಗಾ? ಹಂಗಂತ ಎಲ್ಲಿ ಬರ್‍ಕಂತು?"[೨೦] ಎಂದು ಹೇಳುತ್ತ ಗಂಡ ಎಷ್ಟೇ ವಿರೋಧಿಸಿದರು ತನಗೆ ಇಷ್ಟ ಬಂದ ಹಾಗೆಯೇ ನಡೆದುಕೊಳ್ಳತ್ತಿದ್ದಳು. ಇಲ್ಲಿ ಗಂಡಸಿನ ನಿಯಂತ್ರಣವನ್ನು ಮೀರಿ ಬದುಕನ್ನು ಸಹ್ಯವಾಗಿಸಿಕೊಳ್ಳುವ ಹೆಣ್ಣಾಗಿ ನಾಗಪ್ಪ ಮಾವಯ್ಯನ ಹೆಂಡತಿ ಕಾಣಿಸಿಕೊಳ್ಳುತ್ತಾಳೆ.

ಕತೆಯ ನಾಯಕಿಯಾದ ಗೌರಿ ಅಜ್ಜಿ ಮನೆಗೆ ಬಂದು ಎಲ್ಲರೊಡನೆ ಮಾತನಾಡಿ ಹೊರ ಬಂದು ನಿಂತಿರುತ್ತಾರೆ. ಆ ಸಂದರ್ಭದಲ್ಲಿ "ಬೈಕ್‍ನಲ್ಲಿ ಹೋಗುತ್ತಿರುವವನು ಶೇಖರ ಭಾವ ಅಲ್ದ?" ಎಂದು ಕೇಳಿದಾಗ ನಾಗಪ್ಪ ಮಾವಯ್ಯ ತಕ್ಷಣ ಈ ರೀತಿ ಹೇಳುತ್ತಾರೆ. "ಯಾರಾದರೆ ನಿಂಗೇನಿಯ? ಹೋವು ಇವರಿಗೆಲ್ಲ ಹಾಸಿಗೆ ಹಾಕು. ಮದುವೆಗೆ ನೆರೆದ ಹೆಮ್ಮಕ್ಕಳು ಹೆಂಗಿರಗು!"[೨೧] ಎಂದು ಗದರಿಸುತ್ತಾನೆ. ಇಲ್ಲಿ ಹೆಣ್ಣು ಮಕ್ಕಳು ಯಾರ ಬಗ್ಗೆ ಮಾತನಾಡಬಾರದು. ಹೊರಗೆ ಓಡಾಡಬಾರದು ಮದುವೆ ವಯಸ್ಸಿಗೆ ಬಂದ ಹೆಣ್ಣು ಮಕ್ಕಳಂತು ಯಾವಾಗಲು ತಗ್ಗಿ ಬಗ್ಗಿ ನಡೆಯಬೇಕು ಎಲ್ಲರ ಮಾತಿಗೆ ಗೌರವ ಕೊಡಬೇಕು. ತಿರುಗಿ ಪ್ರಶ್ನೆ ಕೇಳಬಾರದು ಎಂಬ ಧೋರಣೆಯನ್ನು ನಾಗಪ್ಪ ಮಾವಯ್ಯ

ಹೊಂದಿರುವುದನ್ನು ಕಾಣಬಹುದು. ಪಿತೃರೂಪಿ ಸಮಾಜದ ಪ್ರತಿನಿಧಿಯಾಗಿ ಇವನು ಕಾಣಿಸಿಕೊಳ್ಳುತ್ತಾನೆ. ತನ್ನ ಹೆಂಡತಿ ಮಾತನ್ನು ಮೀರಿದಾಗ ಅವಳಿಗೆ ಹೊಡೆಯುತ್ತಾನೆ. ಅವಳ ವರ್ತನೆಯನ್ನು ನಿಯಂತ್ರಿಸಲು ಪ್ರಯತ್ನಿಸುತ್ತಾನೆ. ಆದರೆ ಅವನ ಯಾವ ಬೆದರಿಕೆಗೂ ಹೆದರದ ಅವನ ಹೆಂಡತಿ ಮನೆಯಲ್ಲಿ ತನ್ನ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸಿ ಸಫಲಳಾಗುತ್ತಾಳೆ.

ಸ್ತ್ರೀವಾದ ಸಮಾಜದಲ್ಲಿ ಲಿಂಗಾಧಾರಿತ ಅಸಮಾನತೆಗಳಿವೆ ಎಂಬ ಅರಿವಿನೊಂದಿಗೆ ತನ್ನ ಚಿಂತನೆಯನ್ನು ಪ್ರಾರಂಭಿಸುತ್ತದೆ. ಸಮಾಜದಲ್ಲಿ ಬೇರೆ ಬೇರೆ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಹೆಣ್ಣು ಮಕ್ಕಳು ಸಾಕಷ್ಟು ರೀತಿಯಲ್ಲಿ ಶೋಷಣೆಗಳಿಗೆ ದೌರ್ಜನ್ಯಗಳಿಗೆ ಒಳಗಾಗುತ್ತಿದ್ದು ಇದನ್ನು ಗುರುತಿಸಿ ದಾಖಲಿಸುತ್ತ, ಈ ದುಷ್ಟ ಅನಾರೋಗ್ಯಕರ ಪ್ರವೃತ್ತಿಗಳ ನಿವಾರಣೆಗೆ ನಡೆಸುವ ಪ್ರಜ್ಞಾಪೂರ್ವಕ, ಪ್ರಾಮಾಣಿಕ ಪ್ರಯತ್ನವನ್ನು 'ಸ್ತ್ರೀವಾದ' ಎನ್ನಬಹುದು ಎಂದು ಡಾ.ಡಿ.ಮಂಗಳಾಪ್ರಿಯದರ್ಶಿನಿಯವರು ಅಭಿಪ್ರಾಯ ಪಡುತ್ತಾರೆ.

ಪುರುಷನ ಲೈಂಗಿಕ ಅಗತ್ಯಗಳ ನೆಲೆಯಿಂದಲೇ ಕುಟುಂಬದಲ್ಲಿ ಹೆಣ್ಣಿನ ಸ್ಥಾನಮಾನಗಳು ನಿರ್ಧರಿತವಾಗುವಂತಹ ಕಲ್ಪನೆಯನ್ನು ವಿರೋಧಿಸುತ್ತದೆ. ಗಂಡಿನ ಯಾಜಮಾನತ್ವದ ಹಿನ್ನಲೆಯನ್ನು ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ ಹೀಗೆ ಎಲ್ಲಾ ನೆಲೆಗಳಲ್ಲೂ ಹೆಣ್ಣಿನ ಮೇಲೆ ಆಗುವ ಗಂಡಿನ ದಬ್ಬಾಳಿಕೆಯನ್ನು ಪ್ರತಿಭಟಿಸುವುದು, ಬದುಕಿನ ಪ್ರತಿಯೊಂದು ಪ್ರಮುಖ ತಿರುವಿನಲ್ಲೂ ನಿರ್ಧಾರಗಳನ್ನು ತೆಗೆದುಕೊಳ್ಳುವವನು, ಅಧಿಕಾರ ಚಲಾಯಿಸಬೇಕಾದವನು ಪುರುಷ ಎಂಬ ಪಾರಂಪಾರಿಕ ತಿಳುವಳಿಕೆಯನ್ನು ವಿರೋಧಿಸುವುದು, ಲಿಂಗರಾಜಕಾರಣವನ್ನು ಮೀರಿ ಸ್ತ್ರೀಯರು ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಬೇಕೆಂಬುದು ವೈದೇಹಿಯವರ ಕತೆಗಳ ಆಶಯವಾಗಿದೆ.

**'ಆಭಾ'** ಕತೆಯ ನಾಯಕಿ ಆಧುನಿಕತೆಯ ಎಲ್ಲಾ ಸವಲತ್ತುಗಳಿದ್ದರು ಬದುಕಿನಲ್ಲಿ ಸಂತೋಷ ಪಡಲಾಗದ ಸ್ಥಿತಿಯನ್ನು ಅನುಭವಿಸುತ್ತಾಳೆ. ಮನಸ್ಸಿಗೆ ಬಂದ ಹಾಗೆ ಸ್ವಚ್ಛಂದವಾಗಿ ನಡೆದುಕೊಳ್ಳುತ್ತಾಳೆ. ಆದರೆ ಅವಳ ರೂಂಮೆಂಟ್ ಸಮಿತಾ ಸಾಂಪ್ರದಾಯಿಕ ರೀತಿ ನೀತಿಗಳನ್ನು ರೂಡಿಸಿಕೊಂಡವಳು.ಅದ್ದರಿಂದ ಅವಳಿಗೆ ಆಭಾಳ ನಡವಳಿಗೆ ವಿಚಿತ್ರವೆನಿಸುತ್ತದೆ. ಆಭಾ ಮಲಗಿದ ರೀತಿ ನೋಡಿ "ಮಲಗಲೂ ಹೇಳಿಕೊಡುವುದು ಬೇಕಾ. ಸರಿ ಮಲಕೊ. ಒಳ್ಳೆ ಗಂಡಸರಂತೆ ಮಲಗಿದ್ದೀಯಲ್ಲ."[13] ಎಂದು ಹೇಳುತ್ತಾಳೆ. ಅವಕ್ಕೆ ಉತ್ತರವಾಗಿ ಆಭಾ " ಹಾಗಾದರೆ ಗಂಡಸುತನ ಎಲ್ಲೆಲ್ಲ ಇರುತ್ತವಪ್ಪ!... ಮಲಗುವುದರಲ್ಲಿಯೂ ಇದೆ ಎಂದರೆ !... ಅಥವಾ ಇರುವುದು ಅಲ್ಲಿ ಮಾತ್ರವ ?... "ಬಿಡು. ನಾನೊಂದು ರೀತಿ ಗಂಡಸೇ."[14] ಎನ್ನುತ್ತಾಳೆ. ಇಲ್ಲಿ ಹೆಣ್ಣಿನ ವರ್ತನೆ ಹೀಗೆ ಇರಬೇಕು ಎಂದು ಪುರುಷರೂಪಿ ಸಮಾಜ ನಿಯಂತ್ರಿಸುವುದನ್ನು ಅಲ್ಲಗಳೆಯುತ್ತಾಳೆ. ಗಂಡಸುತನ ಎಂಬುದು ಎಲ್ಲೆಲ್ಲೂ ಇದೆಯೋ ಅಥವಾ ಮಲಗುವಲ್ಲಿ ಮಾತ್ರವ ಎಂದು ವ್ಯಂಗ್ಯ ಮಾಡುತ್ತಾಳೆ. ಆಭಾಳ ಬದುಕಿನಲ್ಲಿ ಆಧುನಿಕತೆಯ ಪ್ರಭಾವದಿಂದ ಎಲ್ಲಾ ದೊರೆತ್ತಿದ್ದರು ಏನೊ ಕಳೆದುಕೊಂಡವಳ ರೀತಿ ಚಡಪಡಿಸುತ್ತಾಳೆ. ಪುರುಷ ಸಮಾಜವನ್ನು ಗೇಲಿಮಾಡುತ್ತ ಅದನ್ನು ಮೀರಿ ಬದುಕಬೇಕು ಎಂಬ ನಿಲುವನ್ನು ಹೊಂದಿದ್ದ ಅವಳು ತನ್ನ ಶೃಂಗಾರ ಸೌಂದರ್ಯದಿಂದ ಪುರುಷರನ್ನು ಸೋಲಿಸಬೇಕು ಎಂದುಕೊಳ್ಳುತ್ತಾಳೆ. ಅದಕ್ಕಾಗಿ ಗಂಡಸಿನ ಹಾಗೆ ತನ್ನ ವರ್ತನೆಯನ್ನು ರೂಢಿಸಿಕೊಳ್ಳುತ್ತಾಳೆ ಎಲ್ಲಾ ಗಂಸರನ್ನು ಗೆಳೆಯರನ್ನಾಗಿ ಮಾಡಿಕೊಳ್ಳುವ ಹಂಬಲದೊಂದಿಗೆ ಅವರೊಡನೆ ಸುತ್ತಾಡಲು ಹೋಗುತ್ತಾಳೆ. ಇಷ್ಟೆಲ್ಲಾ ಆದರು ಬದುಕಿನಲ್ಲಿ ನೆಮ್ಮದಿಯನ್ನು ಪಡೆಯದೆ ಸೋಲನ್ನನುಭವಿಸುತ್ತಾಳೆ. ಹೆಣ್ಣು ಹೆಣ್ಣಾಗಿಯೇ ಇರಬೇಕು.

ಹೆಣ್ಣಾಗಿಯೆ ತನಗೆ ದೊರಕುವ ವಿಶಿಷ್ಟ ಅನುಭವಗಳನ್ನು ಅನುಭವಿಸಿ ಬದುಕಿನಲ್ಲಿ ಸಂತೋಷವನ್ನು, ನೆಮ್ಮದಿಯನ್ನು ಕಂಡುಕೊಳ್ಳಬೇಕು. ಹೆಣ್ಣು ಪುರುಷನನ್ನು ಅನುಕರಣೆ ಮಾಡುವುದರಿಂದ ಬದುಕು ಸಾರ್ಥಕವಾಗುವುದಿಲ್ಲ ಎನ್ನುವ ಧೋರಣೆಯನ್ನು ಲೇಖಕಿ ಈ ಕತೆಯ ಮೂಲಕ ವ್ಯಕ್ತಪಡಿಸಿದ್ದಾರೆ. ಲಿಂಗರಾಜಕಾರಣವನ್ನು ಮೀರುವುದೆಂದರೆ ಗಂಡಸಾಗಿ ಪರಿವರ್ತನೆಗೊಳ್ಳುವುದಲ್ಲ. ಬದಲಾಗಿ ಅವನ ನಿಯಂತ್ರಣಗಳನ್ನು ಮೀರಿ ಬದುಕನ್ನು ಸುಂದರಗೊಳಿಸಿಕೊಳ್ಳುವುದಾಗಿದೆ. ಇಲ್ಲವಾದರೆ ಪುರುಷರು ಹೆಣ್ಣನ್ನು ತುಳಿದು ಹಾಕುತ್ತಾರೆ. ತಮ್ಮ ಉಪಯೋಗಕ್ಕೆ ಮಾತ್ರ ಬಳಸಿಕೊಳ್ಳುತ್ತಾರೆ ಎನ್ನುವ ಅಂಶವನ್ನು ಲೇಖಕಿ ಈ ಕತೆಯಲ್ಲಿ ಚಿತ್ರಿಸಿದ್ದಾರೆ.

ಲಿಂಗರಾಜಕಾರಣದಲ್ಲಿ ಸ್ತ್ರೀ ಶೋಷಕ ನೆಲೆಗಳು ಎಷ್ಟು ಸೂಕ್ಷ್ಮವಾಗಿರುತ್ತದೆ ಎಂದರೆ ಗಂಡನ್ನು ಗಂಡಸಾಗುವಂತೆ ಪ್ರೋತ್ಸಾಹಿಸಿದರೆ ಹೆಣ್ಣನ್ನು ಹೆಂಗಸಾಗಿಸುವಂತೆ ಒತ್ತಾಯಿಸುತ್ತದೆ. ಅವರಿಗೆ ಅವರದೇ ಆದ ಗುಣ ಲಕ್ಷಣಗಳನ್ನು ಆರೋಪಿಸಲಾಗಿದೆ. ಕೌಟುಂಬಿಕ ಕೆಲಸ ಮತ್ತು ಜವಾಬ್ದಾರಿಗಳನ್ನು ಲಿಂಗ ಸಾಪೇಕ್ಷ ನೆಲೆಯಲ್ಲಿ ವಹಿಸಲಾಗಿದೆ. ಇದೆಲ್ಲವನ್ನು ಮೀರಿ ಗಂಡು ಹೆಣ್ಣಿಗೆ ಸಮನಾಗಿ ಹಂಚಿಕೆಯಾಗಬೇಕು ಎನ್ನುವುದು ಸ್ತ್ರೀವಾದದ ಹಕ್ಕೊತ್ತಾಯವಾಗಿದೆ.

ಪಿತೃರೂಪಿ ಲಿಂಗವ್ಯವಸ್ಥೆಯಲ್ಲಿ ಶೀಲ ಅಥವಾ ಪಾತಿವ್ರತ್ಯ ಎನ್ನುವುದು ಹೆಣ್ಣಿಗಷ್ಟೆ ಸಂಬಂಧಿಸಿದ ಪರಿಕಲ್ಪನೆಯಾಗಿದೆ. ಸ್ತ್ರೀವಾದಿಗಳು ಇಂತಹ ಏಕಮುಖಿ ನಿಲುವನ್ನು ಪ್ರಶ್ನಿಸುತ್ತಾರೆ. ಹೆಣ್ಣಿನ ಇಡೀ ವ್ಯಕ್ತಿತ್ವವನ್ನು ಶೀಲದೊಂದಿಗೆ ಸಮೀಕರಿಸುವುದನ್ನು ವಿರೋಧಿಸುತ್ತಾರೆ. ಹೆಣ್ಣು ಗಂಡಿನ ಗುಣ ಸ್ವಭಾವಗಳು ಹುಟ್ಟಿನ ಲಿಂಗದೊಂದಿಗೆ ಸಂಬಂಧಪಟ್ಟದಲ್ಲ. ಇದು ಲಿಂಗಭೇದವನ್ನು ಸೂಚಿಸಲು ಮತ್ತು ಪೋಷಿಸಲು ಪುರುಷಾಧಿಕಾರ ಕಂಡುಕೊಂಡ ತಂತ್ರ. ಈ ಪರಿಕಲ್ಪನೆ ಬಲ,ಧೈರ್ಯ, ಬುದ್ಧಿ, ಅಚಲತೆ, ವೈಚಾರಿಕತೆ, ಅಹಂ ಇವೆಲ್ಲವನ್ನು ಗಂಡು ಗುಣವೆಂದು ಮೃದು, ಸಹನೆ, ಮೌನ, ಚಂಚಲತೆ, ಭಾವುಕತೆ ಮೊದಲಾದವನ್ನು ಹೆಣ್ಣಿನ ಗುಣವೆಂದು ನಿರ್ವಚಿಸುತ್ತದೆ. ಇದೇ ವಿಸ್ಮೃತಿಗೆ ಹೆಣ್ಣು ಕೂಡ ಒಳಗಾಗುತ್ತಾಳೆ. ಆ ಕಾರಣದಿಂದಾಗಿಯೇ ಯಾವ ಸಂದರ್ಭದಲ್ಲಿಯು ಹೆಣ್ಣು ಪುರುಷರೂಪಿಸಿದ ರೀತಿ ನೀತಿಗಳನ್ನು ಮೀರುವುದಿಲ್ಲ. ಜೈವಿಕ ಸ್ವರೂಪಕ್ಕೂ ವ್ಯಕ್ತಿತ್ವಕ್ಕೂ ಅಂತರ್ ಸಂಬಂಧವನ್ನು ಕಟ್ಟುತ್ತದೆ. ಮರೆವು ಕತೆಯಲ್ಲಿನ ಒಂದು ಸನ್ನಿವೇಶವನ್ನು ಈ ಹಿನ್ನೆಲೆಯಲ್ಲಿ ನಿರ್ವಚಿಸಿಕೊಳ್ಳಬಹುದಾಗಿದೆ.

ಬಸ್ಸಿನಲ್ಲಿ ಒಂದು ಹುಡುಗಿಯನ್ನು ಒಬ್ಬ ಗಂಡಸು ರೇಗಿಸುತ್ತಾನೆ. ಅದಕ್ಕೆ ಕೋಪಗೊಂಡ ಹುಡುಗಿ ಅವನ ಕೆನ್ನೆಗೆ ಹೊಡೆದು, ಬೈಯ್ಯುತ್ತಾಳೆ. ಅದನ್ನು ಕಂಡ ಬಸ್ಸಿನ ಜನರೆಲ್ಲರು ಕೂಡ ಅವನನ್ನು ಬೈಯ್ಯುತ್ತಾರೆ. ಅದರಿಂದ ಅವಮಾನಗೊಂಡ ಅವನು ನಾಚಿಕೆಯಿಂದ ಬೆಕ್ಕಿನ ಮರಿಯ ಹಾಗೆ ತಲೆ ತಗ್ಗಿಸುತ್ತಾನೆ. "ಹೆಣ್ಣು ಮಕ್ಕಳನ್ನು ನೋಡಿಲ್ಲವನ ಇವತ್ತಿನವರೆಗೂ? ನಿನಗೇನು ಅಕ್ಕ ತಂಗಿಯರು ಯಾರೂ ಇಲ್ಲವ? ಎಂದು ಅಲ್ಲಿದ್ದ ಮುದುಕರು ಗದರುತ್ತಾರೆ. 'ನಿಂತಿರುವುದು ನೋಡೀಗ ಹೆಂಗಸರಂತೆ!' ಅಂತ ಹೇಳಿ ನಕ್ಕರು ಅದು ಹೆಂಗಸಿನ ದನಿ!"[06] ಇಲ್ಲಿ ತಲೆ ಬಗ್ಗಿಸಿ ಮೌನವಾಗಿ ನಿಲ್ಲುವುದು ಹೆಣ್ಣಿನ ಗುಣ ಎಂಬ ಪುರುಷ ಸಮಾನದ ಮೌಲ್ಯವನ್ನು ಹೆಣ್ಣೇ ಒಪ್ಪಿಕೊಂಡಿರುವುದನ್ನು ಕಾಣಬಹುದಾಗಿದೆ.

'ನಟಿ' ಕತೆಯಲ್ಲಿ ಪುರುಷಾಧಿಕಾರದ ಶೋಷಣೆಯ ವಿಭಿನ್ನ ನೆಲೆಗಳನ್ನ ಲೇಖಕಿ ಚಿತ್ರಿಸಿದ್ದಾರೆ. ಕತೆಯ ಮುಖ್ಯ ಪಾತ್ರವಾದ ರತ್ನ ಎಲ್ಲರ ಹಾವಭಾವಗಳನ್ನು ತನ್ನ ಕೌಶಲದಿಂದ ನಟಿಸಿ ತೋರಿಸುತ್ತಾಳೆ, ರತ್ನಳ ಗಂಡ ಮನೆಯ ಜವಾಬ್ದಾರಿಯನ್ನು ವಹಿಸಿಕೊಳ್ಳದೆ ಅವಳ ಕಷ್ಟಗಳಿಗೆ ಕಾರಣನಾಗುತ್ತಾನೆ. ಆದರೂ ಅದೆಲ್ಲವನ್ನು ಮರೆತು ಎಲ್ಲರನ್ನು ನಗಿಸಲು ರತ್ನ ಪ್ರಯತ್ನಿಸುತ್ತಾಳೆ. ಇದರಿಂದಾಗಿ ತನ್ನ ಮನಸ್ಸಿನ ದುಃಖವನ್ನು ಮರೆಯುತ್ತಾಳೆ. ಪದ್ದಕ್ಕನ ಗಂಡ ಭಗವತಿ ಅವಳನ್ನು ಹಲವು ರೀತಿಯಲ್ಲಿ ಹಿಂಸಿಸುತ್ತಾನೆ.

"ಹೋ. ಅಯಯಬ, ಪದ್ದಕ್ಕನ ಗಂಡ ಗೊತ್ತಿಲ್ದೆ ಹಾಂಗ ? ಆಚೆ ಭಗವತೀ ಪೂಜೆ, ಸ್ವಾಮಿಗಳ ಪಾದಪೂಜೆ ಈಚೆಗೆ ಹೆಂಡ್ತಿಗೆ ಮೆಟ್ಟಿನ ಪೂಜೆ ......... ಹೂ ಕೊದದ್ ಸಮ ಆಯ್ಲಿಲ್ಲೇ, ಚೊಟ್ಟು ಇಡ್ಲಿಲ್ಲೇ, ಪಟಕ್ಕೆ ಸಿಕ್ಸ್‌ಕಾತ್ರಿಲ್ಲೇ......... ನಿನ್ನೇದ್ ಹೂಗು ಮೂಕುಮಿಟ್ಟೀ ಆಯಿ ಹುಟ್ಟೇ............. ಅಂತೆಳಿ ಹೆಂಡ್ತಿಗೆ ಶಾಪಳ ಹಾಕ್ತಾ ಅದೇ ಪೂಜೆ ಅದೇ ಮಂತ್ರ ಭಗವತಿಗೆ."[2]

ದೇವರಿಗೆ ಪೂಜೆ ಮಾಡುವ ಅವರು ಹೆಂಡತಿಯನ್ನು ಜೀತದಾಳುವಿನ ರೀತಿ ನಡೆಸಿಕೊಳ್ಳುತ್ತಾನೆ. ಅವಳು ಮಾಡಿದ ಕೆಲಸದಲ್ಲೆಲ್ಲ ತಪ್ಪು ಹುಡುಕಿ ಹೊಡೆಯುತ್ತಾನೆ. ಅವನು ಹಾಡು ಹೇಳು ಎಂದರೆ ಹೇಳಬೇಕು. ಕೂರು ಎಂದರೆ ಕುಳಿತುಕೊಳ್ಳಬೇಕು. ಇಲ್ಲಿ ಪುರುಷನ ಅಧಿಕಾರ, ದಬ್ಬಾಳಿಕೆಯ ಚಿತ್ರಣವನ್ನು ಕಾಣಬಹುದಾಗಿದೆ. ಹೆಣ್ಣಿನ ಸ್ವಂತಿಕೆಗೆ ಅವಕಾಶವಿಲ್ಲದಿರುವುದನ್ನು ಇಲ್ಲಿ ಲೇಖಕಿ ಚಿತ್ರಿಸಿದ್ದಾರೆ.

ವೈದೇಹಿಯವರು ತಮ್ಮ ಕತೆಗಳ ಮೂಲಕ ಲಿಂಗರಾಜಕಾರಣದ ಹಲವು ನೆಲೆಗಳನ್ನು ಗುರುತಿಸಿದ್ದಾರೆ. ಅಲ್ಲದೆ ಅವುಗಳನ್ನು ವಿರೋಧಿಸುತ್ತ ಹೆಣ್ಣು ತನ್ನತನವನ್ನು ಗಳಿಸಿಕೊಳ್ಳಬೇಕು. ಅವಳು ತನ್ನ ಸಾಧನೆಯಿಂದಾಗಿ ಪುರಷರೂಪಿ ಸಮಾಜ ಹೇರಿದ ಮೌಲ್ಯಗಳನ್ನು ಧಿಕ್ಕರಿಸಿ ತನ್ನಲ್ಲಿರುವ ಮಿತಿಗಳನ್ನು ಮೀರಬೇಕು ಎಂಬ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಬದುಕಿನ ಹಲವು ಮಜಲುಗಳಲ್ಲಿ ಬರುವ ಏರುಪೇರುಗಳನ್ನು ಸಮರ್ಥವಾಗಿ ಎದುರಿಸಿ ಧೈರ್ಯದಿಂದ ಬದುಕುಬೇಕು ಎನ್ನುವುದು ವೈದೇಹಿಯವರ ಕತೆಗಳ ಆಶಯವಾಗಿದೆ.

'ದಾಳಿ' ಕತೆಯ ನಾಯಕಿ ಅವಮಾನವನ್ನು ಸಹಿಸಿ ಅದನ್ನು ಮೌನವಾಗಿ ಪ್ರತಿಭಟಿಸುವುದನ್ನು ಕಾಣಬಹುದಾಗಿದೆ. ಇಲ್ಲಿ ಬಸ್ಸಿನ ಕಂಡಕ್ಟರ್ ಸುಮ್ಮನೆ ಸ್ಟ್ಯಾಂಡನಲ್ಲಿ ನಿಂತ ಅವಳನ್ನು ಬಸ್ಸಿನಲ್ಲಿ ಸೀಟು ಕೊಡುತ್ತೇನೆ ಎಂದು ಹೇಳಿ ಬಸ್ಸ್ ಹತ್ತಿಸಿಕೊಳ್ಳುತ್ತಾನೆ. ಬಸ್ಸ್ ಹೊರಟ ನಂತರ ಅವಳ ಸೀಟು ಮಾಡಿಕೊಡಿ ಎಂದದ್ದಕ್ಕೆ ಅವಳನ್ನು ಹೀನಾಮಾನವಾಗಿ ಬಯ್ಯುತ್ತಾನೆ. ಆದರೆ ಅವಳು ಅದನ್ನೆಲ್ಲಾ ಕೇಳಿಸಿಕೊಂಡು ಏನೂ ಗೊತ್ತಿಲ್ಲದ ಹಾಗೆ ಸುಮ್ಮನೆ ನಿಲ್ಲುತ್ತಾಳೆ. ಅದೆ ಬಸ್ಸಿನಲ್ಲಿದ್ದ ಲಲಿತೆ ಮತ್ತು ಅವಳ ಗೆಳತಿ ಕಂಡಕ್ಟರನ ವರ್ತನೆಯನ್ನು ಖಂಡಿಸುವಂತೆ ಅವರಿಬ್ಬರೇ ಮಾತಾನಾಡಿಕೊಳ್ಳುತ್ತಾರೆ. ಆದರೆ ಅವನ್ನೇ ಜೋರಾಗಿ ಹೇಳಿ ಅವನನ್ನು ಎದುರಿಸಲು ಇಬ್ಬರು ಮುಂದಾಗುವುದಿಲ್ಲ. ಬಯಿಸಿಕೊಂಡ ಹುಡುಗಿ ತಿರುಗಿ ಏನನ್ನು ಮಾತನಾಡದೇ ಮುಗುಳ್ನಗೆಯೊಂದಿಗೆ ಮೌನವಾಗಿ ನಿಲ್ಲುತ್ತಾಳೆ. ಈ ರೀತಿಯಲ್ಲೂ ಪ್ರತಿಭಟನೆಯನ್ನು ವ್ಯಕ್ತಪಡಿಸುವ ಹೆಣ್ಣು ತನ್ನ ಅಸ್ಮಿತ್ವವನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಕಂಡಕ್ಟರ್‌ನ ವರ್ತನೆಯು ಅವಮಾನವೀಯತೆಯನ್ನು ಪ್ರದರ್ಶಿಸುವಂತಿದೆ. ಅವರ ಬಗ್ಗೆ ಮಾತಾನಾಡುತಿದ್ದ ಲಲಿತ ಮತು ಅವಳ ಗೆಳತಿಯು ಹೀಗೆ ಹೇಳುತ್ತಾರೆ.

'ಇಷ್ಟಕ್ಕೂ ಇಲ್ಲಿ ಗಲಾಟೆ ಮಾಡ್ತಿರೋದು ಕಂಡಕ್ಟರ್ ಅಲ್ಲಮ್ಮ, ಒಬ್ಬ ಶುದ್ಧಾಂಗ ಪುರುಷ'

'ಪುರುಷ ಅಲ್ಲ, ಗಂಡಸು. "ಪುರುಷ" ಬಹಳ ಒಳ್ಳೆಯ ಶಬ್ದ. ತಿಳಕೊ'.

'ಸರಿ. ಒಬ್ಬ ಶುದ್ಧಾಂಗ ಗಂಡಸು'[20] ಇಲ್ಲಿ ಗಂಡಸು ಹೆಣ್ಣನ್ನು ಶೋಷಿಸಲು ಮಾಡುವ ತಂತ್ರವನ್ನು ಕಾಣಬಹುದಾಗಿದೆ. ಕತಾನಾಯಕಿಯನ್ನು ಅವಮಾನಗೊಳಿಸಲು ಮೊದಲು ಸಭ್ಯನ ಹಾಗೆ ಮಾತನಾಡಿ ಬಸ್ಸ್ ಹತ್ತಿಸಿಕೊಂಡ ಕಂಡಕ್ಟರ್ ನಂತರ ಅವಳನ್ನು ಅಪಮಾನ ಮಾಡಲು ಪ್ರತ್ನಿಸುತ್ತಾನೆ.

"ಮೇಡಂ–ನೀವು ಸುಮ್ಮನೆ ನಿಂತಿರಿ. ಸುಮ್ಮನಿರಬಾರದಿತ್ತು ಸರೀ ಬೈದು ದಾಳಿ ಮಾಡಬೇಕಿತ್ತು–ದಾಳಿ!" "ಎಂದು ಲಲಿತಾಳ ಗೆಳತಿ ಶೋಭಾ ಹೇಳುತ್ತಾಳೆ. ಆದರೂ ಅವಳು ತನ್ನ ಮುಖದಲ್ಲಿ ಕಸಿಕರವಾಗಲಿ, ಪರೀಕ್ಷೆಯಾಗಲಿ, ವಿಷಾದ ಅಥವಾ ತಿರಸ್ಕಾರವಾಗಲಿ ಯಾವ ಭಾವನೆಯನ್ನು ವ್ಯಕ್ತಪಡಿಸದೆ ಸುಮ್ಮನೆ ನಗುತ್ತಾಳೆ. ಸುಮ್ಮನೆ ಕಿಟಕಿಯ ಹೋರಗೆ ನೋಡುತ್ತ ಗಂಭೀರವಾಗಿ ಕುಳಿತುಕೊಳ್ಳುತ್ತಾಳೆ. ಇಲ್ಲಿ ಹೆಣ್ಣಿನ ಪ್ರತಿಭಟನೆಯ ವಿಭಿನ್ನ ನೆಲೆಗಳನ್ನು ಲೇಖಕಿ ಚಿತ್ರಿಸಿದ್ದಾರೆ. ಕಂಡಕ್ಟರನು ತಾನು ಗಂಡಸು ಎಂಬ ಕಾರಣದಿಂದ ಹೆಣ್ಣನ್ನು ಮಾನಸಿಕವಾಗಿ ಹಿಂಸಿಸಿ ಸಂತೋಷಪಡಲು ಪ್ರಯತ್ನಿಸುತ್ತಾನೆ. ಲಿಂಗರಾಜಕಾರಣದ ಒಂದು ಬಗೆಯನ್ನು ಇಲ್ಲಿ ಕಾಣಬಹುದಾಗಿದೆ.

**"ಒಂದು ಬಾಗಿಲ ಸದ್ದು"** ಕತೆಯ ನಾಯಕಿ ಸಾಂಪ್ರದಾಯಿಕ ಮೌಲ್ಯವನ್ನು ಮೀರಬೇಕೆಂದು 'ಸಾಲಿಗ್ರಾಮ' ವನ್ನು ಸ್ತ್ರೀಯರು ಮುಟ್ಟಬಾರದು ಎಂದು ಹೇಳಿದರು ಅದನ್ನು ಅವಳು ಮುಟ್ಟುತ್ತಾಳೆ. " ನಾವೆಲ್ಲ ಮುಟ್ಟಬಾರದಂತೆ, ನಾವೆಲ್ಲ ಎಂದರೆ ಸ್ತ್ರೀ, ಶೂದ್ರ, ಪತಿತ, ಷಂಡ (ನಾವೆಲ್ಲ ಯಾವಗಲೂ ಒಂದು ಗುಂಪು) ವಿಷ್ಣುಶಂಕರರನ್ನು ಮುಟ್ಟಿ ಪೂಜಿಸಬಾರದು.'ಶಾಲಗ್ರಾಮ' ಶಿಲಾರ್ಚನೆಗೂ ನಾವು ಅನರ್ಹರು! ಬೃಹನ್ನಾರದೀಯ, ಪದ್ಮಪುರಾಣ ಮುಂತಾದವನ್ನು ಆಧಾರಕ್ಕೆ ತೆಗೆದುಕೊಂಡು ಹೀಗೆನ್ನುತ್ತಾರೆ.[21] ಈ ಕತೆಯು ಪುರುಷ ಪ್ರಧಾನ ಸಮಾಜವುರೂಪಿಸಿದ ಮೌಲ್ಯಗಳನ್ನು ಪರಿಶೀಲಿಸುತ್ತದೆ. ಹೆಣ್ಣನ್ನು ಅಸ್ಪೃಶ್ಯಳ ಹಾಗೆ ನೋಡುತ್ತಾರೆ. ಹೆಣ್ಣು ದೇವಸ್ಥಾನದ ಗರ್ಭಗುಡಿಯಲ್ಲಿರುವ ಲಿಂಗವನ್ನು ಪೂಜಿಸಲು ಅನರ್ಹಳು ಎಂದು ಹೇಳಿ ಪುರುಷ ಸಮಾಜವು ಹೆಣ್ಣಿನಲ್ಲಿ ಕೀಳರಿಮೆಯನ್ನು ಮೂಡಿಸಲು ಪ್ರಯತ್ನಿಸಿದೆ. ಪುರುಷ ಸಮಾಜ ತನ್ನನ್ನು ಶ್ರೇಷ್ಠನೆಂದು ಗುರುತಿಸಿಕೊಳ್ಳಲು ಮಾಡಿದ ಹುನ್ನಾರವಿದು. ಆದರೆ ಇದನ್ನಾವುದನ್ನು ಲೆಕ್ಕಿಸದ ಕಥಾನಾಯಕಿ ತನ್ನ ಕುತೂಹಲವನ್ನು ತಣಿಸಲು ಸಾಲಿಗ್ರಾಮವನ್ನು ಮುಟ್ಟುತ್ತಾಳೆ. ಮೊದಲು ಹಿರಿಯರ ವಾಕ್ಯ ಮೀರಿದ್ದಕ್ಕೆ ಹೆದರಿಕೆಯಾದರೂ ನಂತರ ಏನೋ ಒಂದು ರೀತಿಯ ಉಲ್ಲಾಸ ಅವಳನ್ನು ಆವರಿಸಿಕೊಳ್ಳುತ್ತದೆ. ಎಂದೂ ಇಲ್ಲದ ಸಂತೋಷವನ್ನು ಅನುಭವಿಸುತ್ತಾಳೆ. ಇಲ್ಲಿ ತನಗೆ ಸರಿ ಎಂದು ತೋರಿದ್ದನ್ನು ಮಾಡಿದ ಹೆಣ್ಣು ಅದರಿಂದ ಸಂತೋಷಗೊಂಡು, ಸೂಕ್ಷ್ಮವಾಗಿ ಪುರುಷರೂಪಿ ಮೌಲ್ಯಗಳನ್ನು ಪ್ರತಿಭಟಿಸುವುದನ್ನು ಕಾಣಬಹುದಾಗಿದೆ.

ಮಡಿ ಮೈಲಿಗೆಯ ಕಲ್ಪನೆಯನ್ನೇ ವೈದೇಹಿಯವರ ತಪ್ಪು ಅಸ್ಪೃಶ್ಯರು ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಇಲ್ಲಿ ಕೂಡ ಹೆಣ್ಣಿನ ಮುಟ್ಟನ್ನು, ಹೆರಿಗೆಯ ಸಂದರ್ಭವನ್ನು ಮೈಲಿಗೆಯೆಂದು ಗುರುತಿಸುವ ಪುರುಷ ಸಮಾಜದ ಮೌಲ್ಯಗಳನ್ನು ಮೀರಬೇಕು ಎಂಬ ನಿಲುವನ್ನು ಲೇಖಕಿ ತಳೆದಿದ್ದಾರೆ, ಅವುಗಳನ್ನು ಪ್ರಶ್ನಿಸುತ್ತಾರೆ. ಜಾತಿಯನ್ನು ಮೀರಿ ಅಂತರ್‌ಜಾತಿಯ ವಿವಾಹವಾದ ಬ್ರಾಹ್ಮಣ ಕುಟುಂಬದ ವ್ಯಕ್ತಿಗಳ ಚಿತ್ರಣವನ್ನು ಈ ಕಾದಂಬರಿಯಲ್ಲಿ ನೀಡಿದ್ದಾರೆ. ಬದಲಾದ ಸಂದರ್ಭವನ್ನು, ಸನ್ನಿವೇಶಗಳನ್ನು ಸ್ವೀಕರಿಸುವುವಲ್ಲಿ ಹೊಸ ತಲೆಮಾರಿನವರಿಗೂ ಹಿಂದಿನ ತಲೆಮಾರಿನವರಿಗೂ ಇರುವ ಅಂತರವನ್ನು ಲೇಖಕಿ ಇಲ್ಲಿ ಗುರುತಿಸಿದ್ದಾರೆ.

"ಸ್ತ್ರೀ ಸಮಾನತೆಯನ್ನು ಸ್ಥಾಪಿಸುವುದು ಲಿಂಗ ಅಸಮಾನತೆಯನ್ನು ಮೀರುವುದು. ಅನೇಕರು ಅಂದುಕೊಳ್ಳುವಂತೆ ಸ್ತ್ರೀ ಸಮಾನತೆಯನ್ನು ಅಪೇಕ್ಷಿಸುವುದು ಎಂದರೆ ಹೆಣ್ಣು ಗಂಡಿನಂತಾಗುವುದು ಅಥವಾ ಹೆಣ್ಣಿನ ವಸ್ತು ವಿವರಗಳನ್ನು ತ್ಯಜಿಸುವುದಲ್ಲ, ತಾಯ್ತನದಂತಹ ಜೈವಿಕ ಚೈತನ್ಯವನ್ನು ನಿರಾಕರಿಸುವುದೂ ಅಲ್ಲ. ಹೆಣ್ಣಿನ ಅನನ್ಯತೆಯ, ಅಸ್ಮಿತೆಯ ಪ್ರಕಟಣೆಯಲ್ಲಿ ಸ್ತ್ರೀವಾದದ ಕಾಳಜಿ ಮತ್ತು ಅಂತಹ ಅವಕಾಶದ ಸ್ಥಾಪನೆಗಾಗಿ ಅದರ ಹೋರಾಟ." ಎಂಬುದು ಡಾ|| ಗಾಯಿತ್ರಿ ನಾವಡ ಅವರ ಅಭಿಪ್ರಾಯವಾಗಿದೆ.

ಅಡಿಟಿಪ್ಪಣಿ :-

೧. ಸಿಮೋನ್ ದ ಬುವಾ ದ ಸೆಕೆಂಡ್ ಸೆಕ್ಸ್ - ಅನು – ಡಾ. ಎಚ್.ಎಸ್.ಶ್ರೀಮತಿ, ಅಧ್ಯಯನ ಮಂಡಲ, ಬೆಂಗಳೂರು. ಪುಟ – ಪೀಠಿಕೆ ೨೭

೨. ಸ್ತ್ರೀಮತವನುತ್ತರಿಸಲಾಗದೆ? ಎಮ್.ಎಸ್. ಆಶಾದೇವಿ, ಅಕ್ಷರ ಪ್ರಕಾಶನ ಹೆಗ್ಗೋಡು, ಕರ್ನಾಟಕ. ಪುಟ ೭೪

೩. ಅಲೆಗಳಲ್ಲಿ ಅಂತರಂಗ, ವೈದೇಹಿಯವರ ಸಮಗ್ರ ಕಥಾ ಸಂಕಲನ, ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ, ಕರ್ನಾಟಕ, ೨೦೦೬, ಪುಟ – ೧೬೧

೪. ಅದೇ, ಪುಟ – ೨೬೪.

೫. ಅದೇ, ಪುಟ – ೫೭೮.

೬. ಅದೇ, ಪುಟ – ೫೮೨.

೭. ಅದೇ, ಪುಟ – ೩೬೧.

೮. ಅದೇ, ಪುಟ – ೬೨೩.

೯. ಅದೇ, ಪುಟ – ೬೨೫.

೧೦. ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಡಾ. ಆರ್.ಇಂದಿರಾ, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ–೨೦೦೨. ಪುಟ–೭೫

೧೧. ಅದೇ, ಪುಟ – ೪೯೫.

೧೨. ಅದೇ, ಪುಟ – ೪೯೬.

೧೩. ಅದೇ, ಪುಟ – ೪೯೭.

೧೪. ಅದೇ, ಪುಟ – ೪೩.

೧೫. ಅದೇ, ಪುಟ – ೧೩೬.

೧೬. ಅದೇ, ಪುಟ – ೧೪೦.

೧೭. ಅದೇ, ಪುಟ – ೫೧೨.

೧೮. ಅದೇ, ಪುಟ – ೫೧೨.

೧೯. ಅದೇ, ಪುಟ – ೫೬೯.

೨೦. ಅದೇ, ಪುಟ – ೬೦೧.

೨೧. ಅದೇ, ಪುಟ – ೫೮೯.

೨೨. ಅದೇ, ಪುಟ – ೪೯೮

***********

# ೫. ಸಮಾರೋಪ

ಕನ್ನಡ ಕಥಾ ಸಾಹಿತ್ಯದಲ್ಲಿ ಗಂಭೀರ ಹಾಗೂ ಸೂಕ್ಷ್ಮ ನೆಲೆಗಳಲ್ಲಿ ಸಮಾಜವನ್ನು ಪರಿಶೋಧಿಸುತ್ತ ಬಂದಿರುವ ವೈದೇಹಿಯವರ ಸಮಗ್ರ ಕತೆಗಳನ್ನು ಸ್ತ್ರೀವಾದಿ ನೆಲೆಯಲ್ಲಿ ನೋಡುವುದು ಹೆಚ್ಚು ಪ್ರಸ್ತುತ ಎಂಬುದನ್ನು ಈ ಅಧ್ಯಯನ ಪರಿಗಣಿಸಿದೆ. ಸಮಕಾಲೀನ ಸಾಮಾಜಿಕ ಸ್ಥಿತ್ಯಂತರಗಳ ಹಿನ್ನೆಲೆಯಲ್ಲಿ **"ವೈದೇಹಿಯವರ ಕತೆಗಳಲ್ಲಿ ಸ್ತ್ರೀ ಸ್ವಾತಂತ್ರ್ಯದ ಕಲ್ಪನೆ"** ಎಂಬ ಶೀರ್ಷಿಕೆಯಡಿ ಈ ವಸ್ತುವನ್ನು ವಿಶ್ಲೇಷಿಸಲು ಇಲ್ಲಿ ಯತ್ನಿಸಲಾಗಿದೆ. ಆಧುನಿಕ ಬದುಕು ತಂದೊಡ್ಡುವ ಸ್ಥಿತ್ಯಂತರಗಳ ಪರಿಣಾಮವಾಗಿ ಗ್ರಾಮೀಣ ಬದುಕು, ಕೌಟುಂಬಿಕ ಬದುಕು, ಹೆಣ್ಣು-ಗಂಡುಗಳ ನಡುವಿನ ಸಂಬಂಧ ಹಾಗೂ ಮನುಷ್ಯನ ಆಂತರಿಕ ನೆಲೆಯ ಮೇಲೆ ಉಂಟುಮಾಡಿದ ಪ್ರಭಾವ, ಪ್ರೇರಣೆ, ಬಿಕ್ಕಟ್ಟು, ಸಂಘರ್ಷ ಹಾಗೂ ವೈರುಧ್ಯಗಳನ್ನು ವೈದೇಹಿಯವರ ಕಥಾಲೋಕದ ಹಿನ್ನೆಲೆಯಲ್ಲಿ ಇಲ್ಲಿ ಚರ್ಚಿಸಲಾಗಿದೆ.

ಸಾಮಾಜಿಕ, ಕೌಟುಂಬಿಕ, ವ್ಯಕ್ತಿಗತ ಹಾಗೂ ಲಿಂಗರಾಜಕಾರಣದ ನೆಲೆಯಲ್ಲಿ ಹೆಣ್ಣಿನ ಸ್ಥಾನಮಾನ ಮತ್ತು ಸ್ವಂತಿಕೆಯ ಪ್ರಶ್ನೆಗಳನ್ನು ವಸ್ತುನಿಷ್ಠ ನೆಲೆಯಲ್ಲಿ ಪರಿಶೋಧಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಸಮಾಜದಲ್ಲಿ ಪುರುಷಾಧಿಕಾರ, ಧರ್ಮ, ಬ್ರಾಹ್ಮಣಶಾಹಿ, ಜಾತಿ, ಕುಟುಂಬ, ವಿವಾಹ ಮೊದಲಾದ ಸಾಂಸ್ಥಿಕ ಕೇಂದ್ರಗಳು ಹೆಣ್ಣಿನ ಮೇಲೆ ಹೇರುವ ಒತ್ತಡ ಹಾಗೂ ನಿಯಂತ್ರಣಗಳನ್ನು ಗುರುತಿಸಿ, ಅವುಗಳನ್ನು ಪ್ರಶ್ನಿಸುವ ಸ್ತ್ರೀಪರವಾದ ನಿಲುವುಗಳನ್ನು ವೈದೇಹಿಯವರ ಕತೆಗಳ ಹಿನ್ನೆಲೆಯಲ್ಲಿ ನೋಡಲಾಗಿದೆ. ಪರಂಪರೆ ಹಾಗೂ ಆಧುನಿಕತೆ ಇವುಗಳ ಒತ್ತಡಗಳ ನಡುವೆ ಇಲ್ಲಿಯ ಸ್ತ್ರೀಪಾತ್ರಗಳು ಅನುಭವಿಸುವ ಇಕ್ಕಟ್ಟು, ಭಾವನಾತ್ಮಕ ಸಂಘರ್ಷ, ಮಾನಸಿಕ ತುಮುಲ, ಲೈಂಗಿಕ ಕಿರುಕುಳ, ಒಂಟಿತನ, ಪರಕೀಯತೆ ಹಾಗೂ ಇವುಗಳನ್ನು ಮೀರುವ ಹಂಬಲ ಮೊದಲಾದ ಸೂಕ್ಷ್ಮ ಚಿತ್ರಣಗಳನ್ನು ಇಲ್ಲಿ ಪರಿಶೀಲಿಸಲಾಗಿದೆ. ಹೆಣ್ಣೊಬ್ಬಳು ಹೆಂಡತಿಯಾಗಿ, ತಾಯಿಯಾಗಿ, ಮಗಳಾಗಿ, ವಿಧವೆಯಾಗಿ, ಪರಿತ್ಯಕ್ತೆಯಾಗಿ – ಹೀಗೆ ಹಲವು ಮಜಲುಗಳಲ್ಲಿ ಪಲ್ಲಟಗೊಳ್ಳುವ ಹೆಣ್ಣಿನ ಬೌದ್ಧಿಕ ಹಾಗೂ ಭೌತಿಕ ಸ್ಥಿತಿಗತಿಗಳನ್ನು ಇಲ್ಲಿ ಹಿಡಿದಿಡುವ ಪ್ರಯತ್ನ ಮಾಡಲಾಗಿದೆ.

ವೈದೇಹಿಯವರ **'ಅಂತರಂಗದ ಪುಟಗಳು'**, **'ಗುಲಾಬಿಯ ಮೃದು ಪಾದಗಳು'**, **'ಶಕುಂತಲೆಯೊಂದಿಗೆ ಕಳೆದ ಅಪರಾಹ್ನ'**, **'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು'**– ಮೊದಲಾದ ಕತೆಗಳಲ್ಲಿ ಸ್ತ್ರೀಸ್ವಾತಂತ್ರ್ಯದ ಹಾಗೂ ಸ್ತ್ರೀಸಂವೇದನೆಯ ವಿವಿಧ ಮುಖಗಳನ್ನು ಇಲ್ಲಿ ದಾಖಲಿಸಲಾಗಿದೆ. ಸ್ವಾತಂತ್ರ್ಯದ ಹಲವು ಮಗ್ಗಲುಗಳಾದ ಆಯ್ಕೆಯ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ಬೌದ್ಧಿಕ ಸ್ವಾತಂತ್ರ್ಯ, ಲೈಂಗಿಕ ಸ್ವಾತಂತ್ರ್ಯ ಹಾಗೂ ಸಾಂಸ್ಕೃತಿಕ ಅಭಿವ್ಯಕ್ತಿ ಮೊದಲಾದ ಸ್ವಂತಿಕೆಯ ನೆಲೆಗಳನ್ನು ಇಲ್ಲಿನ ಸ್ತ್ರೀಪಾತ್ರಗಳು ಹೇಗೆ ಪ್ರಕಟಪಡಿಸುತ್ತವೆ. ಮತ್ತು ಸಂಪ್ರದಾಯ, ಕುಟುಂಬ, ವಿವಾಹ, ಪುರುಷಾಧಿಕಾರದ ಒತ್ತಡದಿಂದಾಗಿ ತಮ್ಮನ್ನು ತಾವು ತೆರೆದುಕೊಳ್ಳಲಾಗದೆ ಅವಕಾಶಗಳಿಂದ ವಂಚಿತಳಾಗಿಯೇ ಉಳಿದು ಬಿಡುವ ಹೆಣ್ಣಿನ ಚಿತ್ರಣಗಳನ್ನೂ ಇಲ್ಲಿ ಪರಿಶೀಲಿಸಲಾಗಿದೆ. ಹಾಗೆಯೇ ಮದುವೆ, ಸಂತಾನ, ಲೈಂಗಿಕತೆ ಮುಂತಾದ ಕಾರಣಗಳಿಂದ ತವರಿನಲ್ಲಿ, ಗಂಡನ ಮನೆಯಲ್ಲಿ ಹೆಣ್ಣು ಎದುರಿಸುವ ಲಿಂಗತಾರತಮ್ಯ ಹಾಗೂ ಲೈಂಗಿಕ ಹಿಂಸೆಗಳ ಸ್ವರೂಪ – ಇವೇ ಮೊದಲಾದ ವಸ್ತುಸ್ಥಿತಿಗಳನ್ನು ವೈದೇಹಿಯವರ ಕತೆಗಳ ಹಿನ್ನೆಲೆಯಲ್ಲಿ ಪರಿಶೀಲಿಸಲಾಗಿದೆ.

ಆಧುನಿಕತೆಯ ಒತ್ತಡದ ಹಿನ್ನೆಲೆಯಲ್ಲಿ ಬದಲಾಗುತ್ತಿರುವ ಸಾಮಾಜಿಕ ಶೋಷಣೆಯ ಕಲಾತ್ಮಕ ಮಾದರಿಗಳನ್ನು ಇಲ್ಲಿ ಗುರುತಿಸಲಾಗಿದೆ. ವೈದೇಹಿಯವರ **'ಚಂದಲೆ', 'ಅಕ್ಕು', 'ಶಕುಂತಲೆಯೊಂದಿಗೆ ಕಳೆದ ಅಪರಾಹ್ನ'** ಕತೆಗಳು ಸಾಮಾಜಿಕ ವಿನ್ಯಾಸದ ಸೂಕ್ಷ್ಮಗಳನ್ನು, ಲೈಂಗಿಕ ಸಂಬಂಧಗಳ ಬಿಕ್ಕಟ್ಟು ಹಾಗೂ ಮೌಲ್ಯಗಳ ಪರಿಶೋಧನೆ ಮೊದಲಾದ ಚಿಂತನೆಗಳನ್ನು ಕಟ್ಟಿಕೊಡುವಲ್ಲಿ ಹೇಗೆ ಯಶಸ್ವಿಯಾಗಿವೆ ಹಾಗೂ ಲಿಂಗರಾಜಕಾರಣದ ಮೂರ್ತ, ಅಮೂರ್ತ ನೆಲೆಗಳನ್ನು ಹೇಗೆ ಕಟ್ಟಿಕೊಡುತ್ತವೆ ಎಂಬುದನ್ನು ವಿವಿಧ ಅಧ್ಯಾಯಗಳಲ್ಲಿ ಪರಿಶೀಲಿಸಿದೆ.

ವಿವಾಹ ಸಂಸ್ಥೆಯ ವಿವಿಧ ಮುಖಗಳಾದ ಬಾಲ್ಯವಿವಾಹ, ಬಹು ಪತ್ನಿತ್ವ ಅಥವಾ ಪತಿತ್ವ, ವೈಧವ್ಯ, ಪರಿತ್ಯಕ್ತ ಸ್ಥಿತಿಗಳೆಲ್ಲವು ಮಹಿಳೆಯ ಮೇಲಿನ ದೌರ್ಜನ್ಯವನ್ನು ತೀವ್ರಗೊಳಿಸುವ ಅಂಶಗಳು ಹೇಗಾಗಿವೆ? ಈ ಮೂಲಕ ಸ್ತ್ರೀ ಮೇಲಿನ ಹಿಂಸೆಯ ಸ್ವರೂಪವನ್ನು ವೈದೇಹಿಯವರ ಕತೆಗಳು ಹೇಗೆ ನಿರ್ವಚಿಸುತ್ತವೆ ಎಂಬುವುದನ್ನು ಹೆಚ್ಚಿನ ಅಧ್ಯಾಯನದ ಮೂಲಕ ಪರಿಶೀಲಿಸಬಹುದಾಗಿದೆ. ಮಧ್ಯಮ ವರ್ಗದ ಬ್ರಾಹ್ಮಣ ಕುಟುಂಬವು ಮೂಲಭೂತವಾಗಿಯೇ ಹೇಗೆ ಹೆಣ್ಣನ್ನು ಪರಿಭಾವಿಸುತ್ತದೆ, ಸ್ವೀಕರಿಸುತ್ತದೆ ಹಾಗೂ ಬ್ರಾಹ್ಮಣ್ಯದ ಕಟ್ಟುಪಾಡುಗಳ ಮೂಲಕ ನಿಯಂತ್ರಿಸುತ್ತದೆ ಮತ್ತು ಲಿಂಗರಾಜಕಾರಣದ ನೆಲೆಯಲ್ಲಿ ಹೆಣ್ಣನ್ನು ಶೋಷಿಸುತ್ತದೆ – ಮುಂತಾದ ಈ ಹಿನ್ನೆಲೆಗಳಲ್ಲಿ ಸ್ತ್ರೀಮೇಲಿನ ಹಿಂಸೆಯ ಸ್ವರೂಪವನ್ನು ಪರಿಶೋಧಿಸಬಹುದಾಗಿದೆ.

*********

## ಪರಾಮರ್ಶನ ಗ್ರಂಥಗಳು

★ ವಿರಚನೆ
ಗಾಯತ್ರಿ ನಾವಡ
ಎನ್. ಆರ್.ಎ.ಎಚ್. ಪ್ರಕಾಶನ
ಕೋಟೇಶ್ವರ 576 222
ದಕ್ಷಿಣ ಕನ್ನಡ.
1997

★ ಮಹಿಳಾ ಸಾಹಿತ್ಯ ಸಮೀಕ್ಷೆ
ಸಂ. ಶ್ರೀಮತಿ ಆರ್ಯಾಂಬ ಪಟ್ಟಾಬಿ.
ಸಂವಹನ
12/1A ಈವ್ನಿಂಗ್ ಬಜಾರ್ ಹಿಂಭಾಗ
ಶಿವರಾಂಪೇಟೆ ,
ಮೈಸೂರು - 570 001.

★ ಬಗೆ
ಸಬಿಹಾ ಭೂಮಿಗೌಡ
ಲೋಹಿಯಾ ಪ್ರಕಾಶನ
'ಕ್ಷಿತಿಜ'
ಕಪ್ಪಗಲ್ಲು ರಸ್ತೆ
ಬಳ್ಳಾರಿ - 583103.
2001

★ ಸ್ತ್ರೀಮತವನುತ್ತರಿಸಲಾಗದೆ ?
ಸಾಹಿತ್ಯ - ಸಂಸ್ಕೃತಿ ಕುರಿತ ಲೇಖನಗಳು
ಎಂ.ಎಸ್. ಆಶಾದೇವಿ
ಅಕ್ಷರ ಪ್ರಕಾಶನ
ಹೆಗ್ಗೋಡು,
ಸಾಗರ - 577417.
2006

★ ಮಹಿಳೆ ಮತ್ತು ಜಾತಿ
ಒಂದು ಸೈದ್ಧಾಂತಿಕ ಗ್ರಹಿಕೆ
ಡಾ.ಎಂ.ಉಷಾ
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ.

★ ಸಾಹಿತ್ಯ ವಿಮರ್ಶೆ
ಸಂ. ಡಾ.ಜಿ.ಎಂ. ಹೆಗಡೆ,
ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ,
ಬೆಂಗಳೂರು.

★ ಸಾಹಿತ್ಯ ವಿಮರ್ಶೆ
ಸಿ. ಎನ್. ರಾಮಚಂದ್ರನ್
ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ.
ಬೆಂಗಳೂರು - 560002.
2000

★ ಇದು ಮಾನುಷಿಯ ಓದು
ಮಹೇಶ್ವರಿ. ಯು
ಶಿವರಾಮ ಕಾರಂತ ಅಧ್ಯಯನ ಕೇಂದ್ರ
ವಿವೇಕಾನಂದ ಕಾಲೇಜು
ಪುತ್ತೂರು.- 574203.

| | |
|---|---|
| ★ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ | ಸಂ.ಡಾ. ಎಚ್.ಎಸ್. ಶ್ರೀಮತಿ,<br>ಪ್ರಸಾರಾಂಗ<br>ಕನ್ನಡ ವಿಶ್ವವಿದ್ಯಾಲಯ<br>ಹಂಪಿ.<br>2006 |
| ★ ಮಹಿಳಾ ಸಂಕಥನ | ಡಾ. ಗಾಯತ್ರಿ ನಾವಡ<br>ಕನ್ನಡ ಪುಸ್ತಕ ಪ್ರಾಧಿಕಾರ<br>ಚಾಮರಾಜ ಪೇಟೆ<br>[illegible] - 560018.<br>2003 |
| ★ ಸ್ತ್ರೀವಾದ | ಡಾ. ಬಿ.ಎನ್. ಸುಮಿತ್ರಬಾಯಿ<br>ಕರ್ನಾಟಕ ಸಾಹಿತ್ಯ ಅಕಾಡೆಮಿ<br>ಕನ್ನಡ ಭವನ, ಜೆ.ಸಿ.ರಸ್ತೆ,<br>ಬೆಂಗಳೂರು -560002<br>2006 |
| ★ ಸ್ತ್ರೀವಾದ | ಡಾ. ಎಚ್.ಎಸ್. ಶ್ರೀಮತಿ<br>ಪ್ರಸಾರಾಂಗ<br>ಕನ್ನಡ ವಿಶ್ವವಿದ್ಯಾಲಯ<br>ಹಂಪಿ.<br>2003 |
| ★ ಅರಿವಿನ ನಡೆ | ಕವಿತಾ ರೈ,<br>ಲೋಹಿಯಾ ಪ್ರಕಾಶನ<br>'ಕ್ಷಿತಿಜ'<br>ಕಪ್ಪಗಲ್ಲು ರಸ್ತೆ<br>ಬಳ್ಳಾರಿ -583103.<br>2007 |
| ★ ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ | ಕರ್ನಾಟಕ ಸಾಹಿತ್ಯ ಅಕಾಡೆಮಿ<br>ಕನ್ನಡ ಭವನ<br>ಜೆ.ಸಿ.ರಸ್ತೆ,<br>ಬೆಂಗಳೂರು -560002.<br>2006 |
| ★ ಚಹರೆ | ಡಾ . ಎಚ್ .ಎಸ್ . ಶ್ರೀಮತಿ<br>ಇಳಾ ಪ್ರಕಾಶನ<br>ಬೆಂಗಳೂರು. |
| ★ ಸಾಹಿತ್ಯ ಸಂಸ್ಕೃತಿ | ನರಹಳ್ಳಿ ಬಾಲಸುಬ್ರಹ್ಮಣ್ಯ<br>ಅಂಕಿತ ಪುಸ್ತಕ<br>138,ಮೊದಲನೆ ಮಹಡಿ,<br>ಗಾಂಧಿಬಜಾರ್ ಸರ್ಕಲ್<br>ಬಸವನಗುಡಿ,<br>ಬೆಂಗಳೂರು -560004. |

* ದ ಸೆಕೆಂಡ್ ಸೆಕ್ಸ್ — ಸಿಮೋನ್ ದ ಬುವಾ,
(ಅನು)ಡಾ. ಎಚ್. ಎಸ್. ಶ್ರೀಮತಿ
ಅಧ್ಯಯನ ಮಂಡಲ,
ಬೆಂಗಳೂರು. ೨೦೦೭.

* ವೈದೇಹಿಯವರ ಕಥೆಗಳು — ಟಿ.ಪಿ. ಅಶೋಕ
ಕುಂದಾಪುರ ಕನ್ನಡ ಸಂಘ ಮತ್ತು
ಕುಂದಾಪುರ ತಾಲ್ಲೂಕು,
ಕನ್ನಡ ಸಾಹಿತ್ಯ ಪರಿಷತ್ತು.

* ಸಾಹಿತ್ಯ ಕಥನ — ಡಿ.ಆರ್. ನಾಗರಾಜ್
ಅಕ್ಷರ ಪ್ರಕಾಶನ
ಹೆಗ್ಗೋಡು ( ಸಾಗರ ) ಕರ್ನಾಟಕ.
1995

* ಭಾರತೀಯ ಸ್ತ್ರೀವಾದ ಒಂದು ಸಂಕಥನ — ಡಾ. ಗಾಯತ್ರಿ ನಾವಡ
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ. ವಿದ್ಯಾರಣ್ಯ.
2000

* ಬಂಡಾಯ ಸಾಹಿತ್ಯ ಸಂವೇದನೆ — ಸಂ.ಡಾ.ರಂಗರಾಜ
ವನದುರ್ಗ
ಕನ್ನಡ ಸಾಹಿತ್ಯ ಪ್ರತಿಷ್ಠಾನ
ಬೆಂಗಳೂರು.

* ಅನುಲೇಖ — ಡಾ. ಹೇಮ ಪಟ್ಟಣ ಶೆಟ್ಟಿ
ಅನನ್ಯ ಪ್ರಕಾಶನ,
ಧಾರವಾಡ.

* ವಿಚಾರ ಸಾಹಿತ್ಯ ೨ ಸಂಪಾದಕರು — ಡಾ. ಕೆ.ವಿ. ನಾರಾಯಣ
ಡಾ. ಕಾಳೇಗೌಡ ನಾಗವಾರ
ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು -*560056*.

* ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ — ಡಾ. ಡಿ. ಮಂಗಳಾ ಪ್ರಿಯದರ್ಶಿನಿ
ಮಹಿಳಾ ಅಧ್ಯಯನ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ,
ಹಂಪಿ.
2007